# ಭಾರತ ನಾಡ ದೇವಿಯರು.



ಬರೆದವರು :
ಗಿರಿಜಾದೇವಿ ಇಚ್ಚಂಗಿಮಠ
ಧಾರವಾಡ



ಬೆಲೆ : ಹತ್ತಾಣೆ.

ಒಡ ಭಕ್ತಿ

ಸದ್ಗುಣವತಿಯರೂ, ಶಿವಪೂಜಾಸಕ್ತರೂ ಆದ
ನನ್ನ ಆದರದ
ಮಹಾಮಾತೃಶ್ರೀ
**ಶಾಂತಾದೇವಿ ಕಣಬರಗಿಮಠ**
ಇವರಿಗೆ
ಈ ಗ್ರಂಥವನ್ನು ಭಕ್ತಿಯಿಂದ ಅರ್ಪಿಸಿದ್ದೇನೆ.

ಗಿರಿಜಾದೇವಿ ಇಚ್ಛಂಗಿಮಠ.

# ನನ್ನ ನಾಲ್ಕು ಮಾತುಗಳು.

**ಪ್ರಿಯ ಬಂಧು ಭಗಿನಿಯರೆ,**

೧. ಈ ಗ್ರಂಥವನ್ನು ಬರೆಯುವಾಗ ನನಗೊದಗಿದ, ಅನೇಕ ಸಂಕಟಗಳನ್ನು ಪಾರುಮಾಡಿದ ಪರಮಾತ್ಮನಿಗೆ, ಮೊದಲು ನಾನು ನನ್ನ ಅನಂತ ವಂದನೆಗಳನ್ನು ಭಕ್ತಿಯಿಂದ ಅರ್ಪಿಸುವೆನು.

೨ ಈ ಪವಿತ್ರ "ಭಾರತ ನಾಡದೇವಿಯರ ಜೀವನ ಚರಿತ್ರೆ"ಯನ್ನು ಬರೆಯಲು ಪ್ರೋತ್ಸಾಹಕೊಟ್ಟು, ಕೇಳಿದ ಕೂಡಲೇ ಅತ್ಯಾದರದಿಂದ ಹಣ ಕೊಟ್ಟು, ಸಹಾಯಮಾಡಿದ ನನ್ನ ಬಂಧು ಭಗಿನಿಯರಿಗೆ, ನಾನು ನನ್ನ ಕೃತಜ್ಞತಾ ಪೂರ್ವಕವಾದ ವಂದನೆಗಳನ್ನು ಅರ್ಪಿಸುವೆನು.

೩. ಈ ಗ್ರಂಥದಲ್ಲಿ ಒಟ್ಟು ೩೩ ಕಥೆಗಳಿವೆ ಇವು ಕಟ್ಟು ಕಥೆಗಳಲ್ಲ. ಹುಟ್ಟು ಕಥೆಗಳು. ನಿಜವಾಗಿಯೂ ಆಗಿ ಹೋದ ಮಹಾಸಾಧ್ವಿಮಣಿಯರ ಜೀವನ ಲೀಲೆಗಳು. ಇವು ಒಂದಕ್ಕಿಂತ ಒಂದು ಮಿಗಿಲಾಗಿವೆ. ಇವನ್ನು ಓದಿದರೆ ತಾನೇ ತಿಳಿಯುವದು ಅವುಗಳ ಮಹತ್ವ.

೪. ನನ್ನ ಬಂಧು ಭಗಿನಿಯರ ಜೀವನ ಪ್ರಗತಿಗಾಗಿಯೂ, ಆತ್ಮ ಉನ್ನತಿಗಾಗಿಯೂ, ಬಹು ಕಷ್ಟಪಟ್ಟು ಶೋಧಿಸಿ ಈ ಪುಸ್ತಕವನ್ನು ಬರೆದಿದ್ದೇನೆ. ಎಲ್ಲರೂ ದಯವಿಟ್ಟು ಓದಿದರೆ ನನ್ನ ಶ್ರಮವು ಸಾರ್ಥಕ ವಾಗುವದು.

೧೪೪೦ನೆ. ಡಿಶಂಬರ
ಸಾಹಿತ್ಯ ಸಮ್ಮೇಲನ
ಧಾರವಾಡ

ತಮ್ಮ ಭಗಿನಿ
ಗಿರಿಜಾದೇವಿ ಇಚ್ಚಂಗಿಮಠ

# ಈ ಗ್ರಂಥಕ್ಕೆ ಸಹಾಯ ಮಾಡಿದ ಮಹನೀಯರು.

| | | ರೂ. ಆ. ಪೈ. |
|---|---|---|
| ೧ | ಶ್ರೀ ಶಿವಪ್ಪ ಬಸಪ್ಪ ಶೆಟ್ಟರ ಆನೂರು ಹಾವೇರಿ. | ೨೫-೦-೦ |
| ೨ | ಶ್ರೀ ಶಂಕರಗೌಡ ಖಾನಗೌಡ ಬಹಾದ್ದೂರ ದೇಸಾಯಿ. | ೨೫-೦-೦ |
| ೩ | ಶ್ರೀ ಸಂಗಪ್ಪಣ್ಣ ಯಡ್ರಾವಿ ಹಾವೇರಿ. | ೧೦-೦-೦ |
| ೪ | ಶ್ರೀ ಅಡಿವೆಪ್ಪ ಚೆನ್ನಪ್ಪ ಕಿತ್ತೂರ ಹಳ್ಯಾಳ. | ೧೦-೦-೦ |
| ೫ | ಶ್ರೀ ಎನ್. ಆರ್. ಶೆಟ್ಟಿ ಧಾರವಾಡ. | ೫-೦ ೦ |
| ೬ | ಶ್ರೀ ಅಂದಾನೆಪ್ಪ ಕುಂದರಗಿ ಗಜೇಂದ್ರಗಡ. | ೫-೦-೦ |
| | † † † | |
| ೭ | ಶ್ರೀಮತಿ ಶಾಂತಾದೇವಿ ಕಣಬರಗಿಮಠ ಧಾರವಾಡ. | ೧೦-೦-೦ |
| ೮ | ಶ್ರೀಮತಿ ಪಾಪವ್ವಕ್ಕ ಚರಂತಿಮಠ ಧಾರವಾಡ. | ೧೦-೦-೦ |
| ೯ | ಶ್ರೀಮತಿ ಸಣ್ಣಮ್ಮ ಜವಳಿ ಚಿತ್ತವಾಡಿಗಿ ಹೊಸಪೇಟೆ. | ೧೦-೦-೦ |
| ೧೦ | ಸೌ. ಲೀಲಾವತಿ ಅಂಗಡಿ ಜಕನೂರು. | ೫-೦-೦ |
| ೧೧ | ಸೌ. ಸೋಮಲದೇವಿ ಮುಂಚ್ಚಿಕೊಪ್ಪಮಠ ಶಿರಾಳಕೊಪ್ಪ. | ೫-೦-೦ |
| ೧೨ | ಸೌ. ನೀಲಮ್ಮ ಕಲ್ಲಪ್ಪ ಅಂಗಡಿ ಧಾರವಾಡ. | ೫-೦-೦ |
| ೧೩ | ಸೌ. ನೀಲವ್ವ ಶಾಂತಗಿರಿ ಗದಗ. | ೫-೦-೦ |
| ೧೪ | ಸೌ. ದಿವಂಗತ ಚಿಕ್ಕಮ್ಮ ಮೂಗಿ ಬೈಲಹೊಂಗಲ. | ೫-೦-೦ |
| ೧೫ | ಸೌ. ಬಂಗಾರೆಮ್ಮ ನೌಲಿ ಧಾರವಾಡ. | ೨-೮-೦ |
| ೧೬ | ಶ್ರೀಮತಿ ದುಂಡವ್ವಕ್ಕ ನೌಲಿ ಧಾರವಾಡ. | ೨-೮-೦ |
| ೧೭ | ಸೌ. ತಂಗೆವ್ವ ಪಾಟೀಲ ಧಾರವಾಡ. | ೨-೦-೦ |
| ೧೮ | ಶ್ರೀಮತಿ ಶಾಂತಾಬಾಯಿ ಜಪ್ಪು ಧಾರವಾಡ. | ೨-೦-೦ |
| | | ೧೪೪-೦-೦ |

# ಅನುಕ್ರಮಣಿಕೆ




| | ಪುಟ |
|---|---|
| ೧. ಅಕ್ಕಮಹಾದೇವಿ. | ೧ |
| ೨. ನೀಲಲೋಚನೆ. | ೭ |
| ೩. ನಾಗಲಾಂಬಿಕೆ. | ೧೩ |
| ೪. ಹೇಮರಡ್ಡಿ ಮಲ್ಲಮ್ಮ. | ೧೮ |
| ೫. ಹೆಳವನಕಟ್ಟೆ ಗಿರಿಯಮ್ಮ. | ೨೩ |
| ೬. ಮೀರಾಬಾಯಿ. | ೨೮ |
| ೭. ಚಿತ್ತೂರ ಪದ್ಮಿನಿ. | ೩೪ |
| ೮. ಜೋಧಪುರದ ರಾಣಿ. | ೩೯ |
| ೯. ಅಹಲ್ಯಾಬಾಯಿ. | ೪೩ |
| ೧೦. ಮುಮತಾಜ ಬೇಗಂ. | ೪೭ |
| ೧೧. ಜೇಬ ಉನ್ನೀಸಾ. | ೪೯ |
| ೧೨. ಚಾಂದ ಬೀಬಿ. | ೫೪ |
| ೧೩. ಝಾಂಸಿ ಲಕ್ಷ್ಮೀಬಾಯಿ. | ೫೭ |
| ೧೪. ಬೆಳವಡಿ ಮಲ್ಲಮ್ಮ. | ೬೧ |
| ೧೫. ಕೆಳದಿ ಚನ್ನಮ್ಮಾಜಿ. | ೬೫ |
| ೧೬. ಕಿತ್ತೂರ ಚನ್ನಮ್ಮ. | ೬೮ |
| ೧೭. ನರಗುಂದ ಸಾವಿತ್ರಿಬಾಯಿ. | ೭೨ |

| | ಪುಟ |
|---|---|
| ೧೮. ಲಕ್ಷ್ಮೇಶ್ವರ ಗುಂಡಮ್ಮಾ. | ೭೪ |
| ೧೯. ರಾಣಿ ದೇವಾಜಮ್ಮಣಿ. | ೭೮ |
| ೨೦. ಮಹಾರಾಣಿ ಲಕ್ಷ್ಮಮ್ಮಣ್ಣಿ. | ೭೯ |
| ೨೧. ರಾಣಿ ಕೆಂಪನಂಜಮ್ಮಣ್ಣಿ. | ೮೦ |
| ೨೨. ಹದಿಬದೆಯ ಹೊನ್ನಮ್ಮ. | ೮೧ |
| ೨೩. ವಾಗ್ದೇವಿ ಕಂತಿ. | ೮೫ |
| ೨೪. ಶೃಂಗೇರಿ ಶಾರದಾಂಬಾ. | ೮೮ |
| ೨೫. ಸೀತಾದೇವಿ. | ೯೨ |
| ೨೬. ಮಂಡೋದರಿ. | ೯೯ |
| ೨೭. ಸಾವಿತ್ರಿ ಸತ್ಯವಾನ. | ೧೦೯ |
| ೨೮. ದಮಯಂತಿ. | ೧೧೩ |
| ೨೯. ದ್ರೌಪದಿ. | ೧೧೮ |
| ೩೦. ತಾರಾಮತಿ. | ೧೨೩ |
| ೩೧. ಅನಸೂಯ. | ೧೨೭ |
| ೩೨. ಅನಲಾಯಿ. | ೧೨೯ |
| ೩೩. ಅರುಂಧತಿ. | ೧೩೩ |






ಅಕ್ಕಮಹಾದೇವಿ

# ಅಕ್ಕಮಹಾದೇವಿ



ತನುವಿನೊಳಗಿದ್ದು ತನುವ ಗೆದ್ದಳು. ಮನದೊಳಗಿದ್ದು ಮನವ ಗೆದ್ದಳು.
ವಿಷಯದೊಳಗಿದ್ದು ವಿಷಯಂಗಳ ಗೆದ್ದಳು. ಲಿಂಗಸಂಗದಿಂದ ಭವವ ಗೆದ್ದಳು.
ಶ್ರೀ ಶೈಲದ ಚನ್ನಮಲ್ಲಿಕಾರ್ಜುನನ, ಹೃದಯ ಕಮಲವ ಬಗೆದು ಹೊಕ್ಕು,
ನಿಜಪದವನ್ನೈದಿದ ಮಹಾದೇವಿಯಕ್ಕನ, ಶ್ರೀಪಾದಕ್ಕೆ ನಮೋ ನಮೋ ಎಂಬೆನು.

—ಪ್ರಭುದೇವರು

ಸುಮಾರು ಎಂಟನೂರು ವರ್ಷಗಳ ಹಿಂದೆ, ಮೈಸೂರ ದೇಶದ ಉಡುತಡಿ ಯೆಂಬ ಪಟ್ಟಣದಲ್ಲಿ, ನಿರ್ಮಲ ಮತ್ತು ಸುಮತಿಯೆಂಬ ಒಳ್ಳೆಯ ಶಿವಭಕ್ತ ದಂಪತಿಗಳಿದ್ದರು. ಅವರ ಹೊಟ್ಟೆಯಲ್ಲಿ ಹುಟ್ಟಿದವಳು ನಮ್ಮ ಕಥಾನಾಯಕಿ ಮಹದೇವಿಯಕ್ಕ. ಆ ಉಡುತಡಿಯೆಂಬ ಪಟ್ಟಣವನ್ನು ಕೌಶಿಕನೆಂಬ ಒಬ್ಬ ಜೈನ ಅರಸು ರಾಜ್ಯವಾಳುತಿದ್ದನು. ಆತನು ಒಂದು ದಿನ ಮೆರವಣಿಗೆಯಿಂದ ಬರುತ್ತಿರುವಾಗ, ಮಹದೇವಿಯು ತನ್ನ ಮನೆಯ ಬಾಗಿಲ ಮುಂದೆ ನಿಂತುದನ್ನು ಕಂಡನು. ಮಹದೇವಿಯು ಬಹು ರೂಪ ವತಿಯು, ರಾಜನು ಆಕೆಯನ್ನು ಮೋಹಿಸಿ ಲಗ್ನವಾಗಬೇಕೆಂದು ಅವಳ ತಂದೆತಾಯಿಗೆ ಹೇಳಿಕಳುಹಿಸಿದನು. ಮಹದೇವಿಯ ಮನೆಗೆ ರಾಜದೂತರು ಬಂದು, ಅವಳ ತಂದೆ ತಾಯಿಗಳಿಗೆ ನಿಮ್ಮ ಮಗಳನ್ನು ನಮ್ಮ ರಾಜನಿಗೆ ಕೊಡಿರೆಂದು ಕೇಳಿದರು. ಇದನ್ನು ಕೇಳಿದ ಕೂಡಲೆ ಆ ತಂದೆ ತಾಯಿಗಳು

ಗಾಬರಿಯಾಗಿ, ರಾಜನು ಅನ್ಯ ಕುಲದವನು, ನಾವು ಶಿವಭಕ್ತರು, ಮಹದೇವಿಯನ್ನು ಕೊಡಲಿಕ್ಕಾಗುವದೇ ? ಅವಳು ಒಪ್ಪುವಳೇ ? ಎಂದರು. ಅಯ್ಯಾ! ನಿಮ್ಮ ಮಗಳನ್ನು ನಮ್ಮ ರಾಜನಿಗೆ ಕೊಟ್ಟರೆ, ನಿಮ್ಮ ಬಡತನವು ಬಯಲಾಗುತ್ತದೆ. ರಾಜ್ಯವು ನಿಮ್ಮದಾಗುತ್ತದೆ. ನಿಮ್ಮ ಮಗಳು ಬೇಕಾದುದನ್ನು ಉಂಡುಟ್ಟು ಸುಖಪಡುತ್ತಾಳೆ. ನೀವು ಪ್ರೀತಿಯಿಂದ ಕೊಡದಿದ್ದರೆ, ರಾಜನು ಒತ್ತಾಯದಿಂದಲಾದರೂ ಆಕೆಯನ್ನು ಕರೆದು ಕೊಂಡು ಹೋಗುತ್ತಾನೆ, ಎಂದ ಮಾತಿಗೆ, ಆ ಶಿವಭಕ್ತರು ಸಿಟ್ಟಿಗೆದ್ದು ರಾಜದೂತರನ್ನು ಬೈದು ಕಳುಹಿಸಿದರು.

ರಾಜದೂತರು ನಡೆದ ಸಂಗತಿಗಳನ್ನೆಲ್ಲಾ ರಾಜನಿಗೆ ತಿಳಿಸಲು, ರಾಜನು ಸ್ವತಃ ಮಹದೇವಿಯ ಮನೆಗೆ ಬಂದನು. ಆತನಿಗೆ ಅವಳನ್ನು ಲಗ್ನವಾಗ ಬೇಕೆಂಬ ಹುಚ್ಚು ತಲೆಗೇರಿತ್ತು. ಮಹದೇವಿ ! ಅರಮನೆಗೆ ಹೋಗೋಣ ನಡೆ. ನೀನು ಕೇಳಿದ್ದನ್ನು ಕೊಡುವೆನು, ನೀನು ಹೇಳಿದಂತೆ ಕೇಳುವೆನು. ಮಾತಿಗೆ ತಪ್ಪುವುದಿಲ್ಲ. ಏಳು, ಬೇಗನೆ ಅರಮನೆಗೆ ಹೋಗೋಣ ಎಂದು ಹಲುಬಿದನು. ಇದನ್ನು ಕೇಳಿದ ತಂದೆ ತಾಯಿಗಳು ಬಹು ಚಿಂತೆಗೊಳಗಾದರು. ಮಹ ದೇವಿಯು ಕಣ್ಣೀರ ಸುರಿಸಿದಳು. ತನಗೊದಗಿದ ವಿಪತ್ತಿನಿಂದ ಪಾರಾಗುವ ಬಗೆಯು ತೋಚದೆ, ಮಹದೇವಿಯು ರಾಜನ ಮಾತುಗಳನ್ನು ಕೇಳಿ, ಇಗೋ ! ರಾಜನೆ ? ಕೊಟ್ಟ ಮಾತಿಗೆ ತಪ್ಪಬಹುದು. ವಿಚಾರಮಾಡು. ನಾನು ಹೇಳಿದಂತೆ ನಡೆಯುವಿಯಾ ? ನಿಜವೆ ? ನಿಜವೆಂದು ಕೌಶಿಕನು ಉತ್ತರ ಕೊಡಲು, ಹಾಗಾದರೆ ಬರುತ್ತೇನೆಂದು ಅಕ್ಕನು ತಂದೆ ತಾಯಿಗಳಿಗೆ ನಮಸ್ಕಾರಮಾಡಿ, ಅವರಿಗೆ ಪರಿಪರಿಯಿಂದ ಸಮಾಧಾನ ಹೇಳಿ, ರಾಜನು ಕೊಟ್ಟ ಮಾತಿನಲ್ಲಿ ಅವನನ್ನು ಸೋಲಿಸಿ ಬರುವೆನೆಂದು ಶಪಥಮಾಡಿ, ಕೌಶಿಕನ ಅರಮನೆಗೆ ಹೋದಳು.

ರಾಜನು ಅರಮನೆಯಲ್ಲಿ ಮಹದೇವಿಯನ್ನು ಮೋಹಿಸಿ ರಮಿಸ ಹೋದನು. ಮಹದೇವಿಯು ಬಹುಜಾಣೆ. ಅರಸನನ್ನು ಕುರಿತು ಹೇಳಿದಳು. ನೀನು ವೀರಶೈವನಲ್ಲ. ಭವಿಯು. ಆದುದರಿಂದ ನೀನು ಲಿಂಗಧಾರಣ ಮಾಡಿ ಕೊಂಡು ವೀರಶೈವನಾದರೆ ಮಾತ್ರ, ನಾನು ನಿನ್ನನ್ನು ಲಗ್ನವಾಗುತ್ತೇನೆ.

ಎಂದು ಮಹದೇವಿಯು ದಿಟ್ಟತನದಿಂದ ನುಡಿದಳು. ಈ ಮಾತನ್ನು ಕೇಳಿದ ಕೂಡಲೆ ರಾಜನು ಎದೆಗುಂದಿದನು. ನಾನು ಇವಳಿಗಾಗಿ ನನ್ನ ಮತವನ್ನೂ ಬಂಧು ಬಳಗದವರನ್ನೂ, ತೊರೆಯಲೇ? ಜನರೇನು ಆಡಿಕೊಳ್ಳಬಹುದು? ಇವಳನ್ನಾದರೂ ಲಗ್ನವಾಗದೆ ಹೇಗೆ ಬಿಡಲಿ? ಎಂದು ಚಿಂತಿಸಿ ಮಹದೇವಿಯ ಮೈಮೇಲೆ ಕೈ ಹಾಕಹೋದನು.

ಆಗ ಮಹದೇವಿಯು "ರಾಜನೇ ಇದು ನಿನಗೆ ಸರಿಯಲ್ಲ, ಕೊಟ್ಟ ಮಾತನ್ನು ನೆನಪು ಮಾಡಿಕೊ, ನಾನೊಬ್ಬಳೇ ಇಲ್ಲಿದ್ದೇನೆಂದು ನೀನು ತಿಳಿಯ ಬೇಡ. ಇಲ್ಲಿ ಶಿವನೂ ಇದ್ದಾನೆ. ನನ್ನ ಮೈ ಮುಟ್ಟಿದರೆ ನೀನು ಸುಟ್ಟು ಹೋಗುವಿ. ಎಂದು ಬಹು ಸಿಟ್ಟಿನಿಂದ ನುಡಿದಳು. ಆದರೂ ರಾಜನಿಗೆ ಬುದ್ಧಿ ಬರಲಿಲ್ಲ. ಮಹದೇವಿಯನ್ನು ಮುಟ್ಟಹೋದನು, ಆಗ ಮಹದೇವಿಯು ಶಿವ ಶಿವಾ! ನನಗೆ ಇಂತಹ ಹೊತ್ತು ತಂದಿಯಾ? ನೀನೆ ನನಗೆ ಗತಿ ಎಂದು ಶಿವನನ್ನು ನೆನೆಸಿ, ಅಯ್ಯೊ! ಈ ನನ್ನ ಹಾಳಾದ ರೂಪಕ್ಕಾಗಿಯೇ ನೀನು ಮೋಹಿಸಿರುವೆಯಾ? ಛೀ ಮೂಢಾ,! ಎಲವುರಕ್ತಗಳಿಂದ ಕೂಡಿದ ಈ ಮಾಂಸದ ಮುದ್ದಿಗೆ ಮರುಳಾಗಿರುವಿಯಾ? ಎಂದು ಹೇಳಿ ತಾನುಟ್ಟ ಸೀರೆಯನ್ನೂ, ತೊಟ್ಟ ಕುಪ್ಪಸವನ್ನೂ, ತೆಗೆದು ಹಾಕಿ ಬತ್ತಲೆಯಾದಳು. ರಾಜನು ಇದನ್ನು ನೋಡಿ ಬೆರಗಾದನು. ಇವಳನ್ನು ಲಗ್ನವಾಗಬೇಕೆಂದಿದ್ದ ಹುಚ್ಚು ಇಳಿಯಿತು. ಮುಂದೆ ಚಾಚಿದ ಕೈ ಹಿಂಜರಿಯಿತು. ಅಕ್ಕನ ವೈರಾಗ್ಯವನ್ನು ಕಂಡು ನಡಗಿದನು.

ಅಕ್ಕನು ಅರಮನೆಯಿಂದ ಬತ್ತಲೆಯಾಗಿ ಹೊರಟಳು. ತಾಯಿ ತಂದೆಗಳು ಬಹಳವಾಗಿ ಅತ್ತರು; ಕರೆದರು. ಬಂಧು ಬಾಂಧವರೂ ನೆರೆಹೊರೆಯವರೂ ಪರಿಪರಿಯಿಂದ ಕರೆದರು, ಅಕ್ಕನು ಯಾರ ಮಾತನ್ನೂ ಕೇಳಲಿಲ್ಲ. ಅವ್ವಗಳಿರಾ! ಈ ದೇಹವು ಶಿವನದು. ಶಿವನೇ ನನಗೆ ಗಂಡನು. ಶಿವನನ್ನು ಹುಡುಕಿಕೊಂಡು ಹೋಗುವೆನೆಂದು, **ಶ್ರೀಶೈಲದ ಚನ್ನಮಲ್ಲಿಕಾರ್ಜುನನನ್ನು** ಅರಸಿ ಹೊರಟಳು. ಅಯ್ಯೋ? ಮಹದೇವಿ! ಹೋದೆಯಾ? ನಮ್ಮ ಕೈ ಬಿಟ್ಟಿಯಾ? ಎಂದು ತಾಯಿ ತಂದೆಗಳು ಗೋಳಾಡಿದರು.

ಇತ್ತ ಅಕ್ಕನು ಬಸವಾದಿ ಪ್ರಮಥರ ಮಹಿಮೆಯನ್ನು ಕೇಳಿ ಕಾಲು ನಡಿಗೆಯಿಂದ ಕಲ್ಯಾಣ ಪಟ್ಟಣಕ್ಕೆ ಬಂದಳು. ಆ ಕಾಲಕ್ಕೆ ಬಸವಾದಿ ಪ್ರಮಥರು ವೀರಶೈವ ಮತವನ್ನು ಪ್ರಚಾರ ಮಾಡುತಿದ್ದರು. ಅಲ್ಲಿ ಒಂದು ಕಡೆ ಎಲ್ಲ ಶಿವಶರಣರು ಸೇರಿ ಜನರಿಗೆ ಉಪದೇಶ ಮಾಡುತ್ತಿದ್ದರು. ಅವರ ಆಸ್ಥಾನಕ್ಕೆ **'ಅನುಭವ ಮಂಟಪ'**ವೆಂದು ಕರೆಯುತ್ತಿದ್ದರು. ಅಲ್ಲಿಗೆ ಅಕ್ಕನು ಬತ್ತಲೆಯಾಗಿ ಪುರುಷರ ಎದುರಿನಲ್ಲಿ ಹೋಗಲು, ಎಲ್ಲ ಶಿವಶರಣರು ಬೆರಗಾದರು. **ಪ್ರಭುದೇವರು,** ಅವ್ವಾ! ನೀನಾರು ? ಇಲ್ಲಿಗೇಕೆ ಬಂದೆ ? ಇದೇನು ನಿನ್ನ ದೇಹ ? ಹೀಗೇಕೆ ? ನಿನ್ನ ಗಂಡನಾರು ? ಬತ್ತಲೆಯಾಗಿ ಪುರುಷರಿದುರಿಗೆ ಬರಬಹುದೆ? ಎಂದು ಕೇಳಿದರು. ಆಗ ಅಕ್ಕನು, ಅಣ್ಣಗಳಿರಾ ! ನಾನು ನಿಮ್ಮ ಕೂಸು. ಚನ್ನಮಲ್ಲಿಕಾರ್ಜುನನು ಎನ್ನ ಗಂಡ. ನಿಮಗೆ ನಾಚಿಕೆ ಬರಬಾರದೆಂದು ಈ ಕೂದಲುಗಳಿಂದ ನಾನು ನನ್ನ ಮೈಯ್ಯನ್ನು ಮುಚ್ಚಿಕೊಂಡಿದ್ದೇನೆಂದು ಹೇಳಲು, ಪ್ರಭುದೇವರು ಅಕ್ಕನನ್ನು ನಾನಾರೀತಿಯಿಂದ ಪರೀಕ್ಷಿಸಿ, ಅಕ್ಕನ ಅಂಗವು ವಿಕಾರವಳಿದು ಲಿಂಗದಲ್ಲಿ ಬೆರತಿರುವದನ್ನು ಕಂಡು ಸಂತೋಷಪಟ್ಟು, ಎನ್ನಕ್ಕಾ ! ಮುಂದೆ ಬಾಯೆಂದು ಕರದು ಮನ್ನಿಸಿದರು. ಎಲ್ಲ ಶಿವಶರಣರು, ಅಕ್ಕನನ್ನು ಬಹು ಮರ್ಯಾದೆಯಿಂದ ಕಂಡು ಕೊಂಡಾಡಿದರು.

## ಶ್ರೀ ಬಸವಣ್ಣನವರು ಅಕ್ಕನ ಹಿರಿಮೆಯನ್ನು ಈ ರೀತಿಯಾಗಿ ಕೊಂಡಾಡಿರುವರು.

ಅಜಕೋಟಿ ವರುಷದವರೆಲ್ಲರೂ ಹಿರಿಯರೇ ?
ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರೂ ಹಿರಿಯರೇ ?
ನಡುಮುರಿದು ತಲೆ ನಡುಗಿ ನೆರೆತೆರೆ ಹೆಚ್ಚಿ ಮತಿಗೆಟ್ಟು,
ಒಂದನಾಡಹೋಗಿ ಒಂಭತ್ತನಾಡುವ ಅಜ್ಞಾನಿಗಳೆ
ಲ್ಲರೂ ಹಿರಿಯರೇ ? ಅನುವರಿದು ಘನವಬೆರೆಸಿ ಹಿರಿದು
ಕಿರಿದೆಂಬ ಭೇದವ ಮರೆದು, ಕೂಡಲ ಚನ್ನಸಂಗಯ್ಯ
ನಲ್ಲಿ ಬೆರಸಿ ಬೇರಿಲ್ಲದಿಪ್ಪ ಹಿರಿಯತನ, ನಮ್ಮ
ಮಹದೇವಿಯಕ್ಕನಿಗಾಯಿತ್ತು ನೋಡಾ-

ಅಲ್ಲಿಂದ ಮುಂದೆ ಅಕ್ಕನು ಕೆಲಕಾಲ ಕಲ್ಯಾಣದಲ್ಲಿದ್ದು, ಶರಣರ ಒಡನಾಡಿ ಅನುಭವವನ್ನು ಪಡೆದು, ಸ್ತ್ರೀಯರಿಗೆ ಅನೇಕ ಉಪದೇಶವನ್ನು ಮಾಡಿ

ಶ್ರೀಶೈಲದತ್ತ ಸಾಗಿದಳು. ಅಲ್ಲಿ ಅಕ್ಕನು ಚನ್ನಮಲ್ಲಿಕಾರ್ಜುನನನ್ನು ಒಲಿಸುವದಕ್ಕಾಗಿ ತಪಸ್ಸು ಮಾಡಿದಳು. ಅವನ ಚಿಂತೆಯಲ್ಲಿ ಎಷ್ಟೋ ದಿನಗಳನ್ನು ಕಳೆದಳು. ಅನ್ನ ಆಹಾರಗಳನ್ನು ತೊರೆದು, ಬರಿ ತೊಪ್ಪಲ ತಿಂದು ಕಾಲ ಕಳೆದಳು. ದೇಹವು ಬೆಂದು ಬೆಂಡಾಯಿತು. ತಲೆಯ ಕೂದಲು ಜಡೆಗಟ್ಟಿತು. ಆ ಕಾಲಕ್ಕೆ ಅಕ್ಕನು ಚನ್ನಮಲ್ಲಿಕಾರ್ಜುನನ್ನು ಕಾಣದೆ, ಹಂಬಲಿಸಿ ಹಾಡಿದ ವಚನಗಳು ಬಹು ಕರುಣಾರಸಭರಿತವಾಗಿವೆ.

**ಅಯ್ಯಾ, ನೀ ಕೇಳಿದರೆ ಕೇಳು ಕೇಳದಿರ್ದೊಡೆ ಮಾಣು, ನಾನಿನ್ನ ಹಾಡಿದಲ್ಲದೆ ಸೈರಿಸಲಾರೆನಯ್ಯಾ ! ಅಯ್ಯಾ ನೀ ಒಲಿದರೆ ಒಲಿ, ಒಲಿಯದಿರ್ದೊಡೆ ಮಾಣು. ನಾನಿನ್ನ ಪೂಜಿಸಿದಲ್ಲದೆ ಸೈರಿಸಲಾರೆನಯ್ಯ ! ಅಯ್ಯಾ, ನೀ ನೋಡಿದೊಡೆ ನೋಡು, ನೋಡದಿರ್ದೊಡೆ ಮಾಣು. ನಾನಿನ್ನ ನೋಡಿ ಹಿಗ್ಗಿ ಹಾರೈಸಿದಲ್ಲದೆ ಸೈರಿಸಲಾರೆನಯ್ಯ ! ಚನ್ನಮಲ್ಲಿಕಾರ್ಜುನಯ್ಯಾ ! ನಾ ನಿಮ್ಮ ಪೂಜಿಸಿ ಹರುಷದೊಳೋಲಾಡುವೆನಯ್ಯಾ !**

ಅಕ್ಕನು ಈ ರೀತಿಯಾಗಿ ಚನ್ನಮಲ್ಲಿಕಾರ್ಜುನನ ದರ್ಶನಕ್ಕಾಗಿ ಪರಿತಪಿಸುತ್ತಾ ಗಿಡ, ಮರ, ಬಳ್ಳಿ, ಪಶು, ಪಕ್ಷಿ ಮುಂತಾದ ವಸ್ತುಗಳನ್ನು ಹೆಸರಿಟ್ಟು ಕರೆಯುತ್ತಾ **"ಚನ್ನಮಲ್ಲಿಕಾರ್ಜುನನು ಎಲ್ಲಿಹನು ಹೇಳಿರಾ ?"** ಎಂದು ಕೇಳತೊಡಗಿದಳು. ಆ ಸಂದರ್ಭದ ಒಂದು ವಚನ ಎಷ್ಟು ಕರಳು ಕರಗುವಂಥಾದ್ದಿದೆ ನೋಡಿರಿ.

**ಅಳಿಸಂಕುಳವೇ ? ಮಾಮರವೆ ? ಬೆಳದಿಂಗಳೇ ?**
**ಸರವೆತ್ತಿ ಪಾಡುವ ಕೋಗಿಲೆಗಳೇ ? ನವಿಲುಗಳೇ ?**
**ತಟಾಕದೊಳಗಾಡುವ ಹಂಸಗಳೇ ? ತುಂಬಿಗಳೇ ?**
**ನೀವು ನೋಡಿದಿರಾ ! ನೀವು ನೋಡಿದಿರಾ ?—ಚನ್ನ**
**ಮಲ್ಲಿಕಾರ್ಜುನನೆನ್ನ ಗಂಡ. ಎಲ್ಲಿರ್ದಿಹನೆಂಬುದನು ?**

ಹೀಗೆ ಅಕ್ಕನು ಅನಂತ ರೀತಿಯಿಂದ ಹಾಡಿದ ವಚನಗಳು ಬಹಳವಾಗಿವೆ. **'ಮಹದೇವಿಯಕ್ಕನ ವಚನ'** ವೆಂಬ ಪುಸ್ತಕವನ್ನು ಓದಿದರೆ **ಅವು ನಿಮಗೆ ಅದ್ಯಂತವಾಗಿ ತಿಳಿಯುವವು.**

ಅಕ್ಕನ ವಚನ ಸಾಹಿತ್ಯವನ್ನು ಶ್ರೀ ಚನ್ನಬಸವಣ್ಣನವರು ಈ ರೀತಿ ಕೊಂಡಾಡಿದ್ದಾರೆ.

ಆದ್ಯರ ಅರವತ್ತು ವಚನಕ್ಕೆ, ದಣ್ಣಾಯಕರ ಇಪ್ಪತ್ತುವಚನ,
ದಣ್ಣಾಯಕರ ಇಪ್ಪತ್ತು ವಚನಕ್ಕೆ, ಪ್ರಭುದೇವರ ಹತ್ತುವಚನ,
ಪ್ರಭುದೇವರ ಹತ್ತು ವಚನಕ್ಕೆ, ಅಜಗಣ್ಣನ ಐದುವಚನ,
ಅಜಗಣ್ಣನ ಐದು ವಚನಕ್ಕೆ, ಕೂಡಲ ಚನ್ನಸಂಗಯ್ಯನಲ್ಲಿ,
ಮಹದೇವಿಯಕ್ಕಗಳ ಒಂದು ವಚನ ಕಾಣಾ ಸಿದ್ಧರಾಮಯ್ಯ,

ಅಂತೂ ಅಕ್ಕನು ಬಹಳ ಸಾಹಸಮಾಡಿ, ಚನ್ನಮಲ್ಲಿಕಾರ್ಜುನನನ್ನು ಕಂಡು ಕರ ಮುಗಿದು, ಇನ್ನು ಎನ್ನ ನಿಮ್ಮೊಳಗೆ ಐಕ್ಯವ ಮಾಡಿಕೊಳ್ಳೆಂದು ಬಿನ್ನೈಸಲು, ಆ ಚನ್ನಮಲ್ಲಿಕಾರ್ಜುನನು ಕರುಣದಿಂದ ಭವಗೆಟ್ಟು ಬಂದೆಯಾ? ಬಾರೆಂದು ತೆಗೆದು ಬಿಗಿದಪ್ಪಲು, ಮಹದೇವಿಯಕ್ಕನು ಚನ್ನಮಲ್ಲಿಕಾರ್ಜುನನ ಹೃದಯಕಮಲದಲ್ಲಿ ಅಡಗಿದಳು.



# ನೀಲ ಲೋಚನೆ

ವೀರಶೈವ ಮತೋದ್ಧಾರಕನಾದ ಕಲ್ಯಾಣದ **ಶ್ರೀ ಬಸವಣ್ಣನವರ** ಧರ್ಮ ಪತ್ನಿಯೇ ಶ್ರೀ ನೀಲಮ್ಮನವರು. ತಂದೆ ಸಿದ್ದಣ್ಣ ಮಂತ್ರಿ. ತಾಯಿಯ ಹೆಸರು ಸಿಕ್ಕಿಲ್ಲ. ಜನ್ಮಸ್ಥಳವಾವುದು ಗೊತ್ತಿಲ್ಲ. ಶ್ರೀ ಬಸವಣ್ಣ ನವರಿಗೆ ಇಬ್ಬರು ಹೆಂಡರು. ಮೊದಲನೆಯವರು ಗಂಗಾಂಬಿಕೆ ಎರಡನೆ ಯವರೇ ನಮ್ಮ ಕಥಾನಾಯಕಿ ನೀಲಾಂಬಿಕೆ.

ನಮ್ಮ ಶರಣರು ಶ್ರೀ ನೀಲಮ್ಮನವರನ್ನು ನೀಲಲೋಚನೆ, ನೀಲಾಂಬಿಕೆ ಯೆಂದು ಬಹು ಗೌರವವಾಗಿ ಕರೆದಿರುವರು. ಶ್ರೀ ನೀಲಮ್ಮನವರು ಆಚಾರ ವಿಚಾರದಲ್ಲಿ, ನಡೆ ನುಡಿಯಲ್ಲಿ, ಶ್ರೀ ಬಸವಣ್ಣನವರ ಪ್ರತಿ ಬೆಳಕಾಗಿದ್ದರು. ಒಳ್ಳೆಯವರಿಗೆ ಒಳ್ಳೆ ಹೆಂಡತಿಯು ದೊರೆಯುವದು ದುರ್ಲಭ. ಆದರೆ ಬಸವಣ್ಣನವರ ಪುಣ್ಯದ ಮುಂದೆ ಪುಣ್ಯವಿನ್ನೆಂಟೆ? ಶ್ರೀ ಬಸವಣ್ಣನವರ ಮತ್ತು ಶ್ರೀ ನೀಲಮ್ಮನವರ ದೇಹಗಳು ಬೇರೆ ಯಾದರೂ, ಇಬ್ಬರ ಮನಸ್ಸೂ ಆತ್ಮವೂ ಒಂದೇ ಇದ್ದವು. ಇಬ್ಬರ ನಡೆ ನುಡಿಗಳು ಒಂದಾಗಿದ್ದವು.

ಶ್ರೀ ನೀಲಮ್ಮನವರ ಹೃದಯವು ಬಸವಣ್ಣನವರ ಹೃದಯದಂತೆ ಬಹು ವಿಶಾಲವಾದದ್ದಿತ್ತು. ಅಂತೆಯೇ ಶ್ರೀ ಬಸವಣ್ಣನವರು ನಿತ್ಯವೂ ಲಕ್ಷದ ಮೇಲೆ ತೊಂಭತ್ತಾರುಸಾವಿರ ಜನ ಮಹಾಗಣಂಗಳಿಗೆ ಭೋಜನ ತೃಪ್ತಿಪಡಿಸುತ್ತಿದ್ದರಲ್ಲವೆ? ಆ ಎಲ್ಲ ಪಾಕಾದಿಗಳು ಶ್ರೀ ನೀಲಮ್ಮನವರ ಅಮೃತ ಹಸ್ತದಿಂದ ಜರಗುತ್ತಿದ್ದವೆಂದು ಓದುಗರು ಮರೆಯಬಾರದು. ಪತಿಯು ಮನೆಗೆ ಬರುವಾಗ ಒಬ್ಬಿಬ್ಬರು ಅತಿಥಿಗಳನ್ನು ಊಟಕ್ಕೆ ಕರೆದು ಕೊಂಡು ಬಂದರೆ, ಮೂಗು ಮುರಿದು ಪತಿಗೆ ಗದ್ದರಿಸುವ ಸತಿಯರೇ ಬಹಳ. ಆದರೆ ಶ್ರೀ ನೀಲಲೋಚನೆಯವರು ನಿತ್ಯವೂ, ಪತಿಯು ಕೈಕೊಂಡ ಜಂಗಮ ದಾಸೋಹವನ್ನು, ಯಾವ ತಪಃಬಲದಿಂದ ನಡೆಯಿ

ಸುತ್ತಿದ್ದರೆಂಬುದನ್ನು, ನಮ್ಮ ಮಹಿಳೆಯರು ಸ್ವಲ್ಪ ಹೊತ್ತು ಮನದಲ್ಲಿ ಯೋಚಿಸಲಿ?

ಶ್ರೀ ನೀಲಾಂಬಿಕೆಯವರು ಲಿಂಗ ಪೂಜಾ ಧುರೀಣರು. ಆದರೆ ಆಡಂಬರದ ಲಿಂಗ ಪೂಜೆಯವರಲ್ಲ. ಪ್ರತ್ಯಕ್ಷವಾಗಿ ಲಿಂಗದಲ್ಲಿ ಶಿವನನ್ನು ಕಂಡು ಶಿವನೊಳಗಾದವರು. ಶ್ರೀ ಅಕ್ಕಮಹಾದೇವಿಯರಂತೆ ವೈರಾಗ್ಯದಿಂದ ಅಡವಿಗೆ ಹೋಗಿ, ಗಡ್ಡೆಗೆಣಸು ತಪ್ಪಲಾದಿಗಳನ್ನು ತಿಂದು, ಕಷ್ಟದಿಂದ ಶಿವನನ್ನು ಒಲಿಸಿದವರಲ್ಲ. ಮನೆಯಲ್ಲಿದ್ದು ಮನದೊಡೆಯನಾದ ಮಹದೇವ ನನ್ನು ಪೂಜಿಸಿ, ಅವನಲ್ಲಿ ಐಕ್ಯತೆಯನ್ನು ಹೊಂದಿದವರು. ಹೀಗೆಂದ ಮಾತ್ರಕ್ಕೆ ಅಕ್ಕಮಹಾದೇವಿಯವರು, ಶ್ರೀ ನೀಲಮ್ಮನವರಿಗಿಂತ ಕಡಿಮೆ ಯೆಂದು ಓದುಗರು ಎಂದೂ ಭಾವಿಸಬಾರದು.

ಮುಕ್ತಿಗೆ, ಭಕ್ತಿ, ಜ್ಞಾನ, ವೈರಾಗ್ಯವೆಂದು ಮೂರು ಹಾದಿಯುಂಟು. ಅವರವರು ಅವರವರಿಗೆ ತೋಚಿದ ಹಾದಿಯಿಂದಲೂ, ಅವರವರಿಗೊದ ಗಿದ ಪರಿಸ್ಥಿತಿಯ ಮೇಲಿಂದಲೂ, ಹಾದು ಹೋಗಿದ್ದಾರೆ. ದಾರಿ ಬೇರೆಯಾದರೂ ಮುಟ್ಟುವ ಸ್ಥಳ ಒಂದೇ. ನಮ್ಮ ಶರೀರದಲ್ಲಿ ಕಣ್ಣು ಹೆಚ್ಚೋ? ಮೂಗು ಹೆಚ್ಚೋ? ಅಥವಾ ಕಾಲು ಹೆಚ್ಚೋ? ಎಂದು ಕೇಳಿದಾಗ, ಯಾವುದು ಹೆಚ್ಚೆಂದು ಹೇಳಲಿಕ್ಕೆ ಹೇಗೆ ಬರುವು ದಿಲ್ಲವೋ ಅದರಂತೆ, ನಮ್ಮ ಶರಣೆಯರಲ್ಲಿ ಯಾರು ಹೆಚ್ಚು? ಯಾರು ಕಡಿಮೆಯೆಂದು ಹೇಳಲಿಕ್ಕಾಗುವುದಿಲ್ಲ. ಎಲ್ಲರೂ ಶ್ರೇಷ್ಠ. ನಡೆ ಬೇರೆ ಯಾದರೂ ನುಡಿ ಒಂದೇ.

ಶ್ರೀ ನೀಲಮ್ಮನವರು ಒಂದು ಗಂಡು ಮಗುವನ್ನು ಹೆತ್ತಂತೆ ಕಾಣುತ್ತದೆ. ಮಗುವಿನ ಹೆಸರು ಬಾಲಸಂಗಯ್ಯ. ತಮ್ಮ ದೇವರಾದ '**ಸಂಗಮನಾಥನ**' ಹೆಸರನ್ನೇ ಇಟ್ಟಿದ್ದರು. ಬಹು ಮುದ್ದಾದ ಮಗುವು. ಮಹಾ ಶಿವಜ್ಞಾನ ದಂಪತಿಗಳಿಂದ ಜನಿಸಿದ ಮಹಾಜ್ಯೋತಿ ಮಗುವು. ಆದರೆ ಆ ಮಗುವು ಐದಾರು ವರ್ಷದ ಬಾಲ ಪ್ರಾಯವಿರುವಾಗಲೆ, ಪರಮಾತ್ಮನು ಆ ಮಗುವನ್ನು ತನ್ನ ಪಾದಕ್ಕೆ ಅರ್ಪಿಸಿಕೊಂಡನು.

ಏಕೋ ? ಶ್ರೀ ಬಸವಣ್ಣನವರು ಮತ್ತು ಶ್ರೀ ನೀಲಮ್ಮನವರು ಮಗನ ಮೋಹದಲ್ಲಿ ಜಗತ್ತಿನ ಕಲ್ಯಾಣವನ್ನು ಮರೆಯಬಹುದೆಂದೋ ? **ಏನೋ ?** ಈ ಸಂದರ್ಭದಲ್ಲಿ ಶ್ರೀ ನೀಲಮ್ಮನವರಾಗಲೀ ಶ್ರೀ ಬಸವಣ್ಣನವರಾಗಲೀ ಹಾ ! ಮಗನೇ, ಹೋದೆಯಾ ? ನಮ್ಮನ್ನಗಲಿದೆಯಾ ? ಎಂದು ಗೋಳಿಡ ಲಿಲ್ಲ. ಶಾಂತರೀತಿಯಿಂದ ಶಿವನನ್ನು ಕೇಳಿದರು. ಈ ರೀತಿ,

**ಪುಷ್ಪವರಳಿ ಸುವಾಸನೆ ದೋರದ ಮುನ್ನ,**
**ಮೊಗ್ಗೆಯನರ್ಪಿಸಿಕೊಂಡೆಯಾ ? ದೇವಾ !**

ಮಗನು ದೊಡ್ಡವನಾಗಿ ಸಮಾಜಸೇವೆಯನ್ನು ಮಾಡಿ, ತನ್ನ ಕರ್ತವ್ಯವನ್ನು ಮುಗಿಸಿದ ಬಳಿಕ ಕರಕೊಳ್ಳದೆ, ಈಗಾಗಲೇ ಎಳೆ ಬಾಲನನ್ನು ಕರ ಕೊಂಡೆಯಾ ? ಇದರಿಂದ ನಿನಗೆ ಫಲವೇನು ? ಎಂಬರ್ಥದ ವಚನವನ್ನು ಎಷ್ಟು ಸ್ವಾರಸ್ಯವಾಗಿ ನುಡಿದಿದ್ದಾರೆ ನೋಡಿರಿ.

ಶ್ರೀ ನೀಲಮ್ಮನವರು ಕ್ಷಣಿಕವಾದ ಯಾವ ವಸ್ತುವಿನಲ್ಲಿಯೂ ಆಸಕ್ತಿಯನ್ನಿಟ್ಟಿರಲಿಲ್ಲ. ಆದರೂ ಶ್ರೀ ಬಸವಣ್ಣನವರು ಶ್ರೀ ನೀಲಮ್ಮನವರ ಮನವ ನೋಡಲೋಸುಗವೋ ಏನೋ ? ವಜ್ರದ ಓಲೆಗಳ ಮಾಡಿಸಿ ಕಿವಿಯಲ್ಲಿಟ್ಟುಕೊಳ್ಳಲು ತಿಳಿಸಿದರು. ನೀಲಮ್ಮನವರಿಗೆ ಇದು ಮನಸಿಲ್ಲ ದಿದ್ದರೂ, ಪತಿಯಾಜ್ಞೆಯೆಂದು ಅವುಗಳನ್ನು ತಮ್ಮ ಕಿವಿಯಲ್ಲಿ ಧರಿಸಿದರು. ಮುಂದೆ ಕೆಲವು ದಿವಸದ ಮೇಲೆ **ಸಂಗಮನಾಥನು** ಈ ದಂಪತಿಗಳ ಮನವ ನೋಡಬೇಕೆಂದು, ಕಳ್ಳನ ವೇಷವನ್ನು ಧರಿಸಿ ಇವರ ಶಯನಾಗೃಹಕ್ಕೆ ಬಂದು, ಶಿವಯೋಗ ನಿದ್ರೆಯಲ್ಲಿ ಮಲಗಿದ್ದ ಶ್ರೀ ನೀಲಮ್ಮನವರ ಕಿವಿಯಲ್ಲಿದ್ದ, ಹೊನ್ನೋಲೆಗಳನ್ನು ಮೆಲ್ಲನೆ ಬಿಚ್ಚಹತ್ತಿದ್ದನು. ಶಿವಯೋಗ ನಿದ್ರೆಯಿಂದೆಚ್ಚತ್ತ ಶ್ರೀ ಬಸವಣ್ಣನವರು ಅದನ್ನು ನೋಡಿ ಹರುಷಿತರಾಗಿ,

**ಎಲೌ ನೀಲಲೋಚನೆಯೇ, ಏಳು, ಎದ್ದೇಳು. ಬಿಚ್ಚಿ ಕೊಡು, ನಿನ್ನ ಹೊನ್ನೋಲೆಗಳ. ಕಳ್ಳನ ಮನೆಗೊಬ್ಬ ಬಲುಗಳ್ಳ ಬಂದಿಹನು, ಅವನು ಕೂಡಲ ಸಂಗಮನಲ್ಲದೆ, ಮತ್ತಾರೂ ಅಲ್ಲ, ಅಯ್ಯೋ, ನಮ್ಮಯ್ಯನ ಕೈ ಎಷ್ಟು ನೊಂದಿತೋ ?**

ಯೆಂದು ಮರುಗಿ ಶ್ರೀ ನೀಲಮ್ಮನವರನ್ನು ಎಬ್ಬಿಸಿ ಹೇಳಲೋಣ, ಶ್ರೀ ನೀಲಮ್ಮನವರು ಅತ್ಯಾದರದಿಂದ ಆ ಹೊನ್ನೋಲೆಗಳನ್ನು ಬಿಚ್ಚಿ ಕೊಡು ವಷ್ಟರಲ್ಲಿ, ವೇಷಧಾರಿಯಾದ ಸಂಗಮನಾಥನು ಬಯಲಾದನು.

ಹೀಗೆ ನೀಲಮ್ಮನವರು ಮತ್ತು ಬಸವಣ್ಣನವರ ಜೀವನದ ನಡುವೆ ಎಷ್ಟೋ ಮಹಾಪ್ರಸಂಗಗಳು ನಡೆದಿರಬಹುದು. ಅವುಗಳು ನಮಗೆ ಸಂಪೂರ್ಣವಾಗಿ ಸಿಕ್ಕಿಲ್ಲ. ಆದ್ದರಿಂದ ನಾವು ಒಮ್ಮೆಲೆ ವಿಷಯದಿಂದ ಮುಂದೆ ಸಾಗುವೆವು.

ಶ್ರೀ ಬಸವಣ್ಣನವರು ಅಂತ್ಯಕಾಲಕ್ಕೆ **ಕಪ್ಪಡಿ ಸಂಗಮನಾಥನಲ್ಲಿಗೆ** ಹೋಗಿ ಐಕ್ಯವಾಗುವ ಕಾಲಕ್ಕೆ, ಶ್ರೀ ನೀಲಲೋಚನೆಯವರನ್ನು ಕರೆದು ಕೊಂಡು ಬನ್ನಿಯೆಂದು ಹಡಪದಪ್ಪಣ್ಣಗಳನ್ನು ಕಳುಹಲು, ಆ ಅಪ್ಪಣ್ಣ ಗಳು ಕಲ್ಯಾಣಕ್ಕೆ ಬಂದು, ನೀಲಲೋಚನೆಯವರ ಮುಂದೆ ನಿಂತು ನಮಸ್ಕರಿಸಿ, ಲಿಂಗೈಕ್ಯವಾಗುವದಕ್ಕೆ ಬಸವರಾಜ ದೇವರು ನಿಮ್ಮನ್ನು ಕೂಡಲಗೆ ಬರಹೇಳಿದರೆಂದು ಹೇಳಲೋಣ, ಆ ಅಪ್ಪಣ್ಣಗಳೊಡನೆ ಶ್ರೀ **ನೀಲಲೋಚನೆಯಮ್ಮನವರು ನಿರೂಪಿಸಿದ ಪ್ರಸ್ತಾಪದ ವಚನ:—**

**ಇಷ್ಟೆಯ ಹೂವನನುಗೊಳಿಸಲು ಇಷ್ಟೆ ಹಿಪ್ಪೆಯಾಯಿತಯ್ಯಾ,**
**ಸರ್ಪನ ಶಿರಕಂಠದಲ್ಲಿ ಮೂಗುತಿಯ ಸರಗೊಳಿಸಿದೆನಯ್ಯಾ,**
**ನಾವಿಲ್ಲಿದ್ದರೇನು? ನಾವಲ್ಲಿದ್ದರೇನು? ನಮ್ಮ ನಿಮ್ಮ ಸಂಸರ್ಗದಲ್ಲಿ,**
**ನಿರುಪಮಾಕಾರ ಮೂರ್ತಿಗಳಾಗಿ ನಿರವಯವನೈದಿ ನಿಜ**
**ಸುಖಿಯಾದೆನು. ಬಸವನಲ್ಲಿ ಎಮಗೆ ತೆರಹಿಲ್ಲವಯ್ಯಾ,**
**ಅಪ್ಪಣಾ? ಭಾವಶೂನ್ಯಗಳು ನಾನಯ್ಯಾ ಸಂಗಯ್ಯಾ.**

**ನಾನಾರ ಸಾರುವೆನೆಂದು ಚಿಂತಿಸಲೇತಕಯ್ಯಾ? ನಾನಾರ**
**ಹೊಂದುವೆನೆಂದು ಭ್ರಮೆಬಡಲೇಕಯ್ಯಾ? ನಾನಾರ ಇರುವ**
**ನರಿಯೆನೆಂದು ಪ್ರಳಾಪಿಸಲೇಕಯ್ಯಾ? ಪರಿಣಾಮ ಮೂರ್ತಿ**
**ಬಸವನ ರೂಪು, ಕರಸ್ಥಲದಲ್ಲಿ ಬೆಳಗಿದ ಬಳಿಕ, ಸಂಗಯ್ಯನ**
**ಹಂಗು ನಮಗೇತಕ್ಕೆ ಅಪ್ಪಣ್ಣಾ?**

**ಈ ಸಂದರ್ಭದಲ್ಲಿ ಮತ್ತೆ ಶ್ರೀ ನೀಲಮ್ಮನವರು ಹಾಡಿದ ಲಿಂಗ ಪದ:-**

ನೋಡು ನೋಡು ನೋಡು ಲಿಂಗವೇ!
ನೋಡು ನೋಡು ಬಸವಯ್ಯಾನಾಟವಾ, ॥ಪ॥

ಅಲ್ಲಿಗೆ ಎನ್ನನು ಬರಹೇಳಿದರಂತೆ । ಇಲ್ಲಿ ತಾವಿಲ್ಲವೆ ಸಂಗಯ್ಯಾ ।
ಅಲ್ಲಿ ಇಲ್ಲಿ ಯೆಂಬ ಉಭಯ । ಬಲ್ಲ ಮಹಾತ್ಮರಿಗುಂಟೇನಯ್ಯಾ ॥೧॥

ಪೊಡವಿಯ ಭಕ್ತಗಣಂಗಳು ಸಹವಾಗಿ । ಮಡಗಿದ ಶ್ರೀಗುರುಕರದಲ್ಲಿ ।
ದೃಢಚಿತ್ತಕರಿಗೊಂಡು ಕೂಡಿಹೆನೆಂದರೆ । ನ್ನೊಡೆಯ ಸಂಗಮನಾಥ
ನೀತನಲ್ಲವೇ ॥೨॥

ಸಂಗನ ಬಸವಣ್ಣನೆಂದ ನಿರೂಪಕ್ಕೆ । ಹಿಂಗದೆ ಕರವೆತ್ತಿ ಮುಗಿಯುತಲಿ ।
ಸಂಗಮನಾಥನೆ ಈತನೆಂದೆನುತಲಿ । ನ್ನಂಗೈಯ್ಯ ಲಿಂಗದೊಳಡಗುವೆ ॥೩॥

ಹೀಗೆಂದು ಶ್ರೀ ನೀಲಲೋಚನೆಯಮ್ಮನು ಹಡ್ಡದಪ್ಪಗಳನ್ನು ಮರಳಿ ಕಳುಹಲು, ಅವರು ಬಂದು ಬಸವರಾಜ ದೇವರೊಡನೆ ದೇವಾ! ಶ್ರೀನೀಲಾಂಬಿಕೆಯವರು ತಮ್ಮ ಇಷ್ಟಲಿಂಗದೊಳಗೈಕ್ಯವಾಗಿವೆಯೆಂದರೆಂದು ಬಿನ್ನೈಸಲು, ಆದಕ್ಕೆ ಬಸವರಾಜ ದೇವರು ಒಡಂಬಟ್ಟು ಸಂಗಮೇಶ್ವರನಲ್ಲಿ ಐಕ್ಯ ಹೊಂದಿದರು.

**ಈ ಸಂಗತಿಯನ್ನು ಶ್ರೀ ನೀಲಲೋಚನೆಯವರು ತಮ್ಮ ಲಿಂಗದೊಳು ತಿಳಿದು ಪ್ರಳಾಪಿಸಿದ ವಚನ,**

**ಅಡವಿಯಲ್ಲಿ ಕಣ್ಣುಗೆಟ್ಟ ಪಶುವಿನಂತೆ ನಾನು ಪ್ರಳಾಪಿಸುತ್ತಿದ್ದೆನಯ್ಯಾ, ನಾನು ಕಡು ದುಃಖದಿಂದ ಮರುಗಲು, ಶರಣ ಚನ್ನಬಸವಣ್ಣನರಿದು, ಶಿವ ಶಿವಾ! ಯೆಂಬ ಮಂತ್ರವನರುಹಿ, ಅಳಲುವ ಬಳಲಿಕೆಯ ಕಳೆದನಯ್ಯಾ, ಸಂಗಯ್ಯನಲ್ಲಿ ಚನ್ನಬಸವಣ್ಣಂಗೆ, ನಮೋ ನಮೋ ಎನುತಿರ್ದೆನು.**

**ಲಿಂಗದಲ್ಲಿ ಶ್ರೀ ನೀಲಲೋಚನೆಯವರ ಐಕ್ಯ.**

**ಎಲೆ ಅಯ್ಯಾ, ಕರಸ್ಥಲ ಬಯಲಾಯಿತ್ತು,**
**ಎನ್ನ ಕರಸ್ಥಲ ಮನಸ್ಥಲವಾಯಿತ್ತು ಸಂಗಯ್ಯಾ,**
**ಬಸವ ಹೋದತ್ತ ನಾನಡಗಿದೆನಯ್ಯಾ, ನಿಮ್ಮತ್ತ,**

ಇಂತು ಶ್ರೀ ನೀಲಲೋಚನೆಯವರು ತಮ್ಮ ಇಷ್ಟಲಿಂಗದಲ್ಲಿ ಬಯಲಾಗಲು, ಅತ್ತ ಸೊನ್ನಲಾಪುರದಲ್ಲಿ ಸಿದ್ಧರಾಮಯ್ಯ ದೇವರು ತಮ್ಮ ಮಹಾಜ್ಞಾನದಿಂದ ಅದನ್ನು ಅರಿತು ಸ್ತುತಿಸಿದ ವಚನ:—

> ತಾಯೆ! ಪರಮ ಸುಖಾಚಾರ ಮೂರ್ತಿನಡಗಿಸಿ ನೀನಾದೆಯವ್ವ,
> ತಾಯೆ! ಮಹಾಜ್ಞಾನ ಕಲ್ಪಿತದಲ್ಲಿ ನೀನಡಗಿದೆಯವ್ವ,
> ತಾಯೆ! ನೀಲಮ್ಮನೆಂಬ ಸುಖವಾಸಿ ಕಪಿಲಸಿದ್ಧ ಮಲ್ಲಿನಾ
> ಥಯ್ಯ, ನಿಮ್ಮ ತಾಯಿ ನೀಲಮ್ಮ ನೀನಾದಳು.

ಹೀಗೆ ಎಲ್ಲ ಶಿವಶರಣರು ಶ್ರೀ ನೀಲಲೋಚನೆಯವರ ಮಹಿಮೆಯನ್ನು ಕೊಂಡಾಡಿದ್ದಾರೆ. ಶ್ರೀ ನೀಲಲೋಚನೆಯವರು ತ್ರಿಕಾಲ ಮಹಾಜ್ಞಾನಿಗಳು. ಅಂತೆಯೇ ಅವರು ತಮ್ಮ ಜೀವಿತದ ಕಾಲದಲ್ಲಿ ಮುಂದಾಗುವ ಸಂಗತಿಗಳನ್ನು, ತಮ್ಮ ದಿವ್ಯ ದೃಷ್ಟಿಯಿಂದ ಅವಲೋಕಿಸಿ ಕಾಲಜ್ಞಾನವನ್ನು ಬರೆದಿಟ್ಟಿದ್ದಾರೆ. ಆ ಪುಸ್ತಕಕ್ಕೆ **ಶ್ರೀ ನೀಲಮ್ಮನವರ ಕಾಲಜ್ಞಾನ**ವೆಂದು ಕರೆಯುತ್ತಾರೆ. ಅವರ ಕಾಲಜ್ಞಾನದ ಸಂಬಂಧವಾದ ಒಂದು ವಚನದ ಒಂದು ನುಡಿಯು ನಮಗೆ ಸಿಕ್ಕಿದೆ. ಅದನ್ನೇ ಇಲ್ಲಿ ಕೊಟ್ಟಿರುವೆವು.

> ಸುವ್ವಿ ಬಾ ಲಿಂಗಯ್ಯಾ, ಸುವ್ವಿ ಬಾ ಸಂಗಯ್ಯಾ ।
> ಸುವ್ವಿ ಬಾ ಚನ್ನಾ ಬಸವಯ್ಯಾ ।       ||ಪ||
>
> ಪಟ್ಟೇವ ನುಟ್ಟಾರು ಪಟ್ಟೇವ ಹೊದ್ದಾರು ।
> ಪಟ್ಟಣವ ನಾಳ್ವ ಧೊರೆಗಳು ಸುವ್ವಿ ।
> ಪಟ್ಟಣವ ನಾಳ್ವ ಧೊರೆಗಳು ತಾವು ।
> ತಟ್ಟ ಗೋಣಿಯ ನುಟ್ಟಾರು ಸುವ್ವಿ       ||೧||

ಶ್ರೀ ನೀಲಮ್ಮನವರ ಕಾಲಜ್ಞಾನದ ವಚನಗಳು ನಮಗೆ ಎಲ್ಲಿಯೂ ದೊರೆದಿಲ್ಲ. ಪ್ರಯತ್ನ ಮಾಡುವೆವು. ಸಾಧ್ಯವಾದರೆ ಮುಂದಿನ ಮುದ್ರಣದ ಕಾಲಕ್ಕೆ ಒದಗಿಸುವೆವು.

# ನಾಗಲಾಂಬಿಕೆ

ಈ ಮಹಾ ಶಿವಶರಣೆಯು ಶ್ರೀ ಬಸವಣ್ಣನವರ ತಂಗಿಯು. ಈಕೆಯನ್ನು ಶರಣರು ಅಕ್ಕನಾಗಮ್ಮ, ಅಕ್ಕನಾಗಾಯಿ, ನಾಗಲಾಯಿಯೆಂದು ಬಹು ಮರ್ಯಾದೆಯಿಂದ ಕರೆದಿದ್ದಾರೆ. ಈಕೆಯು ಅಣ್ಣನಾದ ಬಸವಣ್ಣನ ಜೊತೆಯಲ್ಲಿ ಬೆಳೆದು, ಅಣ್ಣನ ನಡೆನುಡಿಗಳನ್ನೇ ಅನುಸರಿಸಿದಳು. **ಕಲ್ಯಾಣಪಟ್ಟಣದ ಅನುಭವ ಮಂಟಪದಲ್ಲಿ** ಎಲ್ಲ ಶಿವಶರಣರ ಜ್ಞಾನದ ಮುದ್ದುಕುವರಿ ಈಕೆ. ಬಸವಣ್ಣನವರು ಯಾವಾಗಲೂ ನಾಗಲಾಯಿಯನ್ನು ಜೊತೆಯಲ್ಲಿರಿಸಿಕೊಂಡು ಆಡ್ಯಾಡುತ್ತಿದ್ದುದರಿಂದ ಎಲ್ಲ ಶಿವಶರಣರ ಪರಿಚಯವು ಈಕೆಗಿತ್ತು.

ನಾಗಾಯಿಯ ನಿಧಿಧ್ಯಾಸವು ಚಿಕ್ಕಂದಿನಿಂದಲೂ ಬಸವಣ್ಣನ ಗುರುವಾದ ಕೂಡಲ ಚನ್ನಸಂಗನಲ್ಲಿ ಅಡಕವಾಗಿತ್ತು. ಅಂತೆಯೇ ಈಕೆ ಅವಿವಾಹಿತಳು. ಬ್ರಹ್ಮಚಾರಿಣಿ. ಜ್ಞಾನದ ಪುತ್ಥಳಿ. ಆದರೆ ಶ್ರೀ ಚನ್ನಬಸವಣ್ಣನವರು ಹುಟ್ಟಿದ್ದು ಈ ಅಕ್ಕನಾಗಮ್ಮನವರ ಹೊಟ್ಟೆಯಲ್ಲಿ; ಇದು ಏನು ವಿಚಿತ್ರ? ಪತಿಯಿಲ್ಲದೆ ಪುತ್ರನನ್ನು ಹೇಗೆ ಹಡೆದರು? ಇದು ಬಹು ಆಶ್ಚರ್ಯವಾಗಿ ಕಾಣುತ್ತಿದೆ ಓದುಗರಿಗೆ.

ಓದುಗರೇ! ಆ ಕಾಲದಲ್ಲಿ ಸಂಭವಿಸಿದ ಒಂದು ವಿಷಯವು ಹೀಗಿರುವದು:—ಶ್ರೀ ಬಸವಣ್ಣನವರು ಪುತ್ರಸಂತಾನವಿಲ್ಲದುದಕ್ಕಾಗಿ ಶರಣ ಕಕ್ಕಯ್ಯನ ಮನೆಯ ಮಿಕ್ಕ ಪ್ರಸಾದವನ್ನು, ಹನ್ನೆರಡು ವರ್ಷ ಕಾದು ಕೊನೆಗೂ ಸಿಕ್ಕದೆ, ಒಂದು ಇರುವೆಯು ಕಚ್ಚಿಕೊಂಡು ಬರುತ್ತಿದ್ದ ಪ್ರಸಾದವನ್ನು, ಇರುವೆಗೆ ಸಕ್ಕರೆ ಹಾಕಿ ಬಿಡಿಸಿಕೊಂಡು, ಆ ಮಹಾ ಪ್ರಸಾದವನ್ನು ಬಹು ಭಕ್ತಿಯಿಂದ, ತಮ್ಮ ಶಲ್ಲೆಯದ ಸೆರಗಿನಲ್ಲಿ ಗಂಟು

ಕಟ್ಟಿಕೊಂಡು ಅರಮನೆಗೆ ತಂದು, ಶ್ರೀ ನೀಲಮ್ಮನವರಿಗೆ ಕೊಡಬೇಕೆಂದು ಅದನ್ನು ಯಾರಿಗೂ ತಿಳಿಸದೆ, ಗೂಟಕ್ಕೆ ತಗಲು ಹಾಕಿ ಸ್ನಾನಕ್ಕೆ ದಯಮಾಡಿಸಿದರಂತೆ.

ಆ ಸಮಯದಲ್ಲಿ ನಾಗಲಾಂಬಿಕೆಯು ಬಂದು, ಅಣ್ಣನು ಶಲ್ಲೆಯದ ಸೆರಗಿನಲ್ಲಿ ಏನೋ ಮುಚ್ಚಿಟ್ಟಿರುವನೆಂದು ಬಿಚ್ಚಿ ನೋಡಿ, ಆ ಪ್ರಸಾದ ವನ್ನು ಶಿವಾ ಶಿವಾ! ಮುಕ್ಕಣ್ಣ! ನೀನೇ ಗತಿಯೆಂದು ಸಲಿಸಿದಳಂತೆ. ಆ ಪ್ರಸಾದವೇ ಅಕ್ಕನಾಗಾಯಿಯ ಗರ್ಭದಲ್ಲಿ ಬಿಂದುವಾಗಿ ನಿಂತು ಗರ್ಭ ಉದಿಸಿತಂತೆ. ಹಿಂದಿನಿಂದ ಶ್ರೀ ಬಸವಣ್ಣನವರು ಬಂದು ನೋಡಿ, ನಡದು ಹೋದ ಆಚಾತುರ್ಯಕ್ಕೆ ಮರುಗಿ "ಮಿಂಚಿಹೋದ ಕೆಲಸಕ್ಕೆ ಚಿಂತಿಸಿ ಫಲವಿಲ್ಲೆಂದು" ತಿಳಿದು, ಇದು ಸಂಗಮನಾಥನ ಆಟವೆಂದು ಸುಮ್ಮ ನಾದರು.

ಮುಂದೆ ಅಕ್ಕನಾಗಾಯಿಗೆ ಕ್ರಮವಾಗಿ ನವಮಾಸಗಳು ತುಂಬಿದವು. ಇದರಿಂದ ನಾಗಾಯಿಯು ಕುಗ್ಗಲಿಲ್ಲ. ಕುಸಿಯಲಿಲ್ಲ. ಎನ್ನ ಪ್ರಿಯ ಚನ್ನಸಂಗನು ಎನ್ನ ಮನವ ನೋಡಲೋಸುಗ ಈ ತೊಡರ ತಂದಿಕ್ಕಿರುವನು. ತಂದವನು ಬಂಧನವ ಬಿಡಿಸುವನೆಂದು ಹಸನ್ಮುಖಿಯಾಗಿದ್ದಳು. ಇತ್ತ ಪಟ್ಟಣದ ತುಂಬಾ "ಗಂಡನಿಲ್ಲದ ಬಾಲೆ ಬಸುರಾದಳೆಂತು?" ಎಂದು ಗಲಭೆಯೆದ್ದಿತು. ಈ ಸುದ್ದಿ ಬಿಜ್ಜಳನಿಗೂ ಮುಟ್ಟಿತು. ಕೂಡಲೇ ಬಿಜ್ಜಳನು ಶ್ರೀ ಬಸವಣ್ಣನನ್ನು ಕರೆಯಿಸಿ ಕೇಳಿದನು. "ನಿಮ್ಮಂಥ ಸತ್ಯಶರಣರ ಮನೆಯಲ್ಲಿ ಇಂಥಾ ಅಧರ್ಮಕಾರ್ಯ ನಡೆಯಬಹುದೇ" ಎಂದು? ಆಗ ಬಸವಣ್ಣನವರು ಸ್ವತಃ ತಂಗಿಯನ್ನು ಕರೆಯಿಸಿ ಆಕೆಯ ಬಾಯಿಂದ ಕೇಳೋಣವೆಂದರು.

ಆಗ ತುಂಬಿದ ಸಭೆಗೆ ನಾಗಲಾಂಬಿಕೆಯನ್ನು ಕರೆಯಿಸಿ ಕೇಳಿದರು. ಏನೊಂದೂ ಪಾಪವನ್ನರಿಯದ ಆ ಶರಣೆ ನಾಗಲಾಯಿಯು ಎಲ್ಲ ಪ್ರಮಥರಿಗೆ ವಂದಿಸಿ, ಕರಮುಗಿದು ಪದ್ಮಾಸನದಲ್ಲಿ ಕುಳಿತು, ತನ್ನ ಪ್ರಿಯ ಕೂಡಲ ಚನ್ನಸಂಗನನ್ನು ನೆನೆದಳು. ಆಗ ಗರ್ಭದಲ್ಲಿದ್ದ ಕೂಸು ಈ ರೀತಿಯಾಗಿ ಒಡನುಡಿದುದು:- ನಾನು ಚನ್ನಬಸವಣ್ಣನು. ಪ್ರಸಾದದಿಂದ ಉದ್ಭವಿಸಿದವನು.

ಸತಿ–ಪತಿಗಳ ಸಂಯೋಗ ಎನಗಿಲ್ಲ. ಅಂತೆಯೇ ಒಡಲೊಡೆದು ಉದ್ಭವಿಸುವೆನು ಎಂದು ಕೂಗಿ, ಕೋಟಿ ಸೂರ್ಯರ ಪ್ರಭೆಯಂತೆ ಥಟ್ಟನೆ ಹೊರಗೆ ಬರಲು, ಎಲ್ಲರೂ ಅಚ್ಚರಿಪಟ್ಟರು. ಹೀಗೆಂದು ಪೂರ್ವದ ಇತಿಹಾಸದಿಂದಲೂ, **ಅಕ್ಕನಾಗಮ್ಮನವರ ಜೋಗುಳ ಪದದಿಂದಲೂ** ನಮಗೆ ತಿಳಿಯುವದು.

ಆದರೆ ಗಂಡನಿಲ್ಲದೆ ಪ್ರಸಾದದಿಂದ ಸಂತಾನವಾಗುವ ಬಗೆ ಹೇಗೆಂದು? ಓದುಗರ ಸಂದೇಹವು ಇನ್ನು ಉಳಿಯುವುದಲ್ಲವೇ? ಆ ಸಂಶಯುವನ್ನು ನಾವು ನಮ್ಮ ಬುದ್ಧಿಗೆ ಹೊಳೆದ ಪ್ರಕಾರ ಬಿಡಿಸುವೆವು :— ಬಿಂದುವಿಗೆ ಮೂಲವಾದುದು ಪ್ರಸಾದ. ಆ ಪ್ರಸಾದವೇ ಲಿಂಗ. ಆ ಲಿಂಗವೇ ಪತಿ. ಮಹಾತ್ಮರ ಅಮೃತ ಹಸ್ತದಿಂದ ಇತ್ತುದು ಪ್ರಸಾದಸಿದ್ಧಿ. ಅಂತೆಯೇ ಸಾಕ್ಷಾತ್ ಪರಮಾತ್ಮನ ಅವತಾರವಾದ ಜ್ಞಾನಮೂರ್ತಿ ಚನ್ನಬಸವಣ್ಣನು ಪ್ರಸಾದ ದಿಂದುದ್ಭವಿಸಿ ನಾಗಾಯಿಯ ಗರ್ಭ ಸೀಳಿ ಉದಯಿಸಿದನು. ನಾಗಾಯಿಗೆ ಬೇನೆಯ ನೋವಿಲ್ಲ. ಗರ್ಭ ಒಡೆದ ನೋವಿಲ್ಲ. ಮಹಾ ಶರಣೆಗೆ ಆದೇತರ ನೋವು? ಬಯಸಿ ಹೊಕ್ಕರೆ ನೋವು. ಇಷ್ಟೇಕೆ? ದೇವರ ಲೀಲೆಯನ್ನು ನೋಡಿರಿ. ಎಷ್ಟೋ ಪ್ರಾಣಿಗಳು ಸಂಯೋಗವಿಲ್ಲದೆ ಸಂತಾನ ಉತ್ಪತ್ತಿ ಯಾಗುವದೆಂದು ಸಂಶೋಧಕರು ಹುಡುಕಿದ್ದಾರೆ.

ಉದಾಹರಣೆ :— ನವಿಲುಗಳು ಸಂಯೋಗ ಮಾಡುವುದಿಲ್ಲ. ಗಂಡು ನವಿಲು ಕುಣಿ ಕುಣಿದು, ಅದರ ಆನಂದದಿಂದುರಿದ ಕಣ್ಣ ಹನಿಗಳನು ಹೆಣ್ಣು ನವಿಲು ನೆಕ್ಕಿ, ಗರ್ಭವತಿಯಾಗಿ ಸಂತಾನವನ್ನು ಪಡೆಯುವಂತೆ.

ಸಮುದ್ರ ದಂಡೆಯ ಕೆಲವು ಪ್ರಾಣಿಗಳು ತಮ್ಮ ಮೂತ್ರದಿಂದ ಒಸರಿದ ಬಿಂದುವನ್ನು ಹೆಣ್ಣು ಪ್ರಾಣಿಗಳು ನೆಕ್ಕಿ, ಗರ್ಭಧರಿಸಿ ಸಂತಾನವನ್ನು ಪಡೆಯುವಂತೆ, ಬೆವರಿನಿಂದ ಎಷ್ಟೋ ಪ್ರಾಣಿಗಳು ಉತ್ಪನ್ನವಾಗುವವು. ಹೀಗೆ ಅನೇಕ ಉದಾಹರಣೆಗಳುಂಟು. ಇವೆಲ್ಲಾ ದೇವರ ಅಗಾಧ ಲೀಲೆಯುಲ್ಲವೇ?

ದೇವರು ಜಗತ್ತನ್ನು ತಿರುವು ಮುರುವು ಮಾಡಬಲ್ಲನು. ದೇವರ ಒಲವಿದ್ದರೆ ಯಾವುದು ದುಸ್ಸಾಧ್ಯ?

> ಕೊರಡು ಕೊನರುವುದಯ್ಯ, ಬರಡು ಹಯನಾಗುವದಯ್ಯ, ಕುರುಡಂಗೆ ಕಣ್ಣು ಬರುವವಯ್ಯ, ಹೆಳವಂಗೆ ಕಾಲು ಬರುವವಯ್ಯಾ, ಬಂಜೆ ಮಕ್ಕಳ ಹೆರುವಳಯ್ಯಾ, ವಿಷ ಅಮೃತವಾಗುವದಯ್ಯಾ, ನಿನ್ನೊಲಿಮೆಯಿರೆ ಜಗದೊಳಗೆ ಯಾವದು ಕೊರತೆಯಯ್ಯಾ, ..................

ಹೀಗೆಂದು ಶರಣರು ಹಾಡಿಕೊಂಡಿದ್ದಾರೆ. ಕೊರಡು ಹೇಗೆ ಚಿಗುರುವದು? ಬರಡು ಹೇಗೆ ಹಯನಾಗುವದು? ಎಂದು ಮುಂತಾಗಿ ಕೇಳಿದರೆ ನಾವೇನು ಉತ್ತರ ಕೊಡಬಲ್ಲೆವು? ದೇವರ ಕಡೆಗೆ ಬೊಟ್ಟುಮಾಡಿ ತೋರಿಸುವೆವು. ಆದರೆ ಶರಣರು ನಮ್ಮಂತಲ್ಲ. ಶಿವನಂಥವರು. ಶಿವನಿಗೂ ಶಿವಭಕ್ತರಿಗೂ ಭೇದವಿಲ್ಲ. ಶಿವನಾಟವು ಶಿವಭಕ್ತರಿಗೆ ಗೊತ್ತು. ಅಂತೆಯೇ ಶಿವನು ಯಾವುದನ್ನು ಹೇಗೆ ಮಾಡಬಲ್ಲನೆಂದು ಅವರು ಮೇಲಿನ ವಚನದಲ್ಲಿ ಹಾಡಿದ್ದಾರೆ.

ಮುಂದೆ ಅಕ್ಕನಾಗಾಯಿಯು ಬಸವಣ್ಣ, ಚನ್ನಬಸವಣ್ಣ ಇವರ ತತ್ವದೊಡನೆ ಬೆರತು ಕಾಲ ಕಳೆಯುತ್ತಿದ್ದಳು. ಭಕ್ತಿಯಲ್ಲಿ ಬಸವಣ್ಣ ಮಿಗಿಲಾದರೆ, ಜ್ಞಾನದಲ್ಲಿ ಚನ್ನಬಸವಣ್ಣ ಮಿಗಿಲಾಗಿದ್ದನು. ಅಕ್ಕನಾಗಾಯಿಯ ವಚನಗಳು ನಮಗೆ ಪೂರ್ಣವಾಗಿ ಎಲ್ಲಿಯೂ ಸಿಕ್ಕಿಲ್ಲ. ಕೆಲಮಟ್ಟಿಗೆ ಸಿಕ್ಕಿದವುಗಳನ್ನು ಇಲ್ಲಿ ಕೊಟ್ಟಿರುವೆವು.

ಶ್ರೀ ನೀಲಮ್ಮನವರು ತಮ್ಮ ಇಷ್ಟಲಿಂಗದಲ್ಲಿ ಐಕ್ಯವಾದರೆಂಬ ಸುದ್ದಿಯನ್ನು ಕೇಳಿ **ಅಕ್ಕನಾಗಾಯಿಗಳು** ಪ್ರಳಾಪಿಸಿದ ವಚನ:

> ಅಯ್ಯಾ! ನಾನಧವೆಯಯ್ಯಾ, ಕೈಯ್ಯ ಕೋಲ
> ಕೊಂಬರೆ ಅಯ್ಯಾ? ಎಳೆಗುರುವಿನ ಎಳೆಗಂತಿಯ
> ನೆಳದೊಯ್ಯರೇ ಭಕ್ತರಯ್ಯಾ? ಅಯ್ಯಾ! ಅಯ್ಯಾ!
> ಎನಲೊಯ್ಯರೇ? ಬಸವಣ್ಣ ಪ್ರಿಯ ಚನ್ನಸಂಗಯ್ಯ?

ಅಷ್ಟರಲ್ಲಿ ಶ್ರೀ ಬಸವಣ್ಣನವರೂ ಸಹಾ ಕಪ್ಪಡಿ ಸಂಗಮನಾಥನಲ್ಲಿ ಐಕ್ಯವಾದ ಸುದ್ದಿಯನ್ನು ಕೇಳಿ, **ಅಕ್ಕ ನಾಗಾಯಿಗಳು ಪ್ರಳಾಪಿಸಿದ ವಚನಗಳು,**

**ಭಕ್ತಿಯ ತವನಿಧಿಯೇ? ಮುಕ್ತಿಯ ಮೂರುತಿಯೇ?**
**ಲಿಂಗ ಜಂಗಮದ ಚೈತನ್ಯವೇ? ನಿಮ್ಮನ್ನಗಲಿ ಎಂತು**
**ಸೈರಿಸಲಿ? ಎಲೆ ಅಯ್ಯಾ ಪರಮಗುರುವೇ? ಅಹಾ ಎನ್ನ**
**ಅಂತರಂಗದ ಜ್ಯೋತಿಯೇ! ನಿಮ್ಮ ಒಕ್ಕಶೇಷ ಪ್ರಸಾದವನಿಕ್ಕಿ,**
**ಎನ್ನ ಪಾವನಮಾಡಿ ಉಳುಹಿದಿರಯ್ಯ, ಎನಗಿನ್ನರು ಹೇಳಯ್ಯಾ,**
**ನೀವಲ್ಲದೆ. ನೀವಲ್ಲದೆ ಬಸವಣ್ಣ ಪ್ರಿಯ ಚನ್ನ ಸಂಗಯ್ಯಾ,**
**ನೀವಗಲಿದರೆ ಎನ್ನ ಪ್ರಾಣ ನಿಮ್ಮೊಳಗೆ ಅಗಲು ಬಲ್ಲುದೆ?**
**ಅಯ್ಯಾ, ಬಸವಣ್ಣ ಎನನೊಯ್ಯದೆ ಹೋದೆಯಲ್ಲಾ ?**

ಯೆಂದು ಅಕ್ಕನಾಗಾಯಿಗಳು ಪ್ರಳಾಪಿಸುತ್ತಿರಲು, ಚನ್ನ ಬಸವಣ್ಣನವರು ಸಮಾಧಾನವನ್ನು ಹೇಳಿ, ಉಳುಮೆಯ (ಉಳುವಿಯ) ಮಹಾಮನೆಯ ಕಡೆಗೆ ಸಾಗಿ ಅವರು ಅಲ್ಲಿ ಬಯಲಾದರು. ಅಲ್ಲಿ ಈಗಲೂ ಚನ್ನಬಸವಣ್ಣನವರ ಗದ್ದಿಗೆಯೂ, ಅಕ್ಕನಾಗಮ್ಮನವರ ಗವಿಯೂ ಇವೆ.

## ಅಕ್ಕನಾಗಾಯಿಗಳ ಐಕ್ಯ.

**ಎನ್ನ ತನು ಚೆನ್ನಬಸವಣ್ಣನವರ ಬಯಲ ಬೆರಸಿತ್ತು,**
**ಎನ್ನ ಮನ ಸಂಗನ ಬಸವಣ್ಣನ ನಿಜಪದವ ಬೆರಸಿತ್ತು,**
**ಎನ್ನ ಪ್ರಾಣ ಪ್ರಭುದೇವರ ಬಯಲ ಬೆರಸಿತ್ತು,**
**ಬಸವಣ್ಣ ಪ್ರಿಯ ಚನ್ನಸಂಗನ ಶರಣರು ಒಬ್ಬ,**
**ರೊಬ್ಬರೊಂದೊಂದ ಹಂಚಿಕೊಂಡ ಕಾರಣ ಎನಗೇನು?**
**ಎನಗೇನು? ಇಲ್ಲದೆ ಮಹಾಘನದಲ್ಲಿ ನಿಜವಾಸಿಯಾದೆನು,**

ಇವರಂತೆ ಶಿವಶರಣೆಯರಲ್ಲಿ ಆಗಿಹೋದವರು, ಮುಕ್ತಾಯಿ, ಲಿಂಗವ್ವೆ, ಸುಗ್ಗಲದೇವಿ, ಚಂಗಳೆ, ಲಕ್ಕಮ್ಮ, ನಿಂಬೆಕ್ಕ, ಪಿಟ್ಟವ್ವೆ, ಮುಂತಾದ ಅರವತ್ತುಮೂರು ಪುರಾತನರ ಧರ್ಮಪತ್ನಿಯರು.

---

# ಹೇಮರಡ್ಡಿ ಮಲ್ಲಮ್ಮ

ಮದ್ರಾಸ ಇಲಾಖೆಯ ಕರ್ನೂಲ ಜಿಲ್ಹೆಯ ಶ್ರೀಶೈಲದ ಬಳಿಯಲ್ಲಿ, ಸಿದ್ಧಾಪುರವೆಂಬ ಗ್ರಾಮವುಂಟು. ಅಲ್ಲಿ ಹೇಮರಡ್ಡಿ ಎಂಬ ರಡ್ಡೀ ಕುಲದ ಒಬ್ಬ ಗೃಹಸ್ಥನಿದ್ದನು. ಅವನಿಗೆ ಐನು ಮಂದಿ ಗಂಡುಮಕ್ಕಳಿದ್ದರು. ಅವರ ಹೆಂಡಂದಿರು ಅತ್ತೆಯ ಮನೆಗೆ ನಡೆ–ನುಡಿಯಲಿಕ್ಕೆ ಬಂದರು. ಅವರಲ್ಲಿ ಮೂರನೆಯ ಮಗನ ಹೆಂಡತಿಯೇ ನಮ್ಮ ಕಥಾನಾಯಕಿ ಮಲ್ಲಮ್ಮನು.

ಈ ಮಹಾಶರಣೆಯು ಅತ್ತೆ, ಮಾವ, ಭಾವ, ಮೈದುನ, ಪತಿ ದೇವರ ಸೇವೆಯನ್ನು ಮನಮುಟ್ಟಿ ಮಾಡುತ್ತಾ, ಎಡರಿಗೆ ಅಂಜದೆ, ಸಂಪದಕ್ಕೆ ಹಿಗ್ಗದೆ, ಶಾಂತಿಗೆಡದೆ, ಲೌಕಿಕ ಚಮತ್ಕಾರ್ಯಗಳನ್ನು ಅರಿಯದೇ ಇದ್ದಳು. ಆ ಮುಗ್ಧೆ ಈ ರೀತಿ :—

ಬೆಳಗಿನಲಿ ಶಂಭುವಂ ನೆನೆಯುತೇಳ್ದಾನನವ । ತೊಳೆದು ಭಸಿತವಂ ಧರಿಸಿ ಪುದಿದ ಶಿವಭಾವದಿಂ । ದೊಲಿದು ಪತಿಯಂ ಮಾವನಂ ದೊಡ್ಡವರ ನತ್ತೆಯಂ ಭಾವರಂ ವಂದಿಸಿ ॥ ನಿಲಯಮಂ ಮುಂದ ಣಂಗಣವ ನೆಲ್ಲವನುಡುಗಿ । ಸಲೆ ಹೊಸ್ತಲೊಳೆಗಳಿಗೆ ಸಾರಣೆ ಯನೆ ಹಾಕಿ ನೀರ ಚಳೆಗೊಟ್ಟು ರಂಗವಲ್ಲಿಯನಿಟ್ಟು ಕಣ್ಮನಕೆ ಸೊಗಸೆನೆ ನಿಮಿರ್ಚುತಿರ್ದಳು ॥

ಮಲ್ಲಮ್ಮನ ಸುಸ್ವಭಾವವನ್ನೂ, ಸದಾಚಾರವನ್ನೂ, ಸ್ವಚ್ಛತೆಯನ್ನೂ, ಗುರು–ಹಿರಿಯರ ಸೇವೆಯನ್ನೂ, ಪತಿಭಕ್ತಿಯನ್ನೂ, ಕಂಡು, ಇವಳ ನೆಗೆಯಣ್ಣಿಯರು "ಇವಳು ನಮಗಿಂತ ಮೇಲಾದಳೆಂದೂ, ಇನ್ನು ನಮ್ಮ ಕಾಡುತನವು ಹೊರ ಬೀಳುವದೆಂದೂ" ಸಂತಾಪಗೊಂಡು ಅತ್ತೆಯ ಮುಂದೆ

ಮಲ್ಲಮ್ಮನ ವಿರುದ್ಧವಾಗಿ ದೂರು ಹೇಳಿದರು. ಈ ರೀತಿಯಾಗಿ :—

ಇವಳ ಕೈಯಿಂದೊಂದು ಕೆಲಸವಾಗುದಿಲ್ಲ । ಮಿವಳು ಬೈತಲೆ ಕಲಕ ದಂತೆ ತಿದ್ದಿಕೊಳ್ಳುತ್ತ । ವಿವಳು ಹಗಲೆಲ್ಲ ತೊಳೆವುತ ತೀಡಿಕೊಳ್ಳು ವುಳು ಬಸವಿಯರ ತೆರದಿ ॥ ಭವನನಮಂ ಪಿಡಿದು ಕಂಡವರಿಗೆ ಅನ್ನವಂ ಇಕ್ಕಿ । ಸವೆವಂತೆ ಪಾತ್ರೆಗಳ ತಿಕ್ಕಿ ಮಾವನ ಮಿಕ್ಕಿ ಇವಳು ಮನೆಯಂ ಹಾಳು ಮಾಡುವಳೆನುತತ್ತೆಗನುವಿನಿಂದೊರೆದರವರು ॥

ಅತ್ತೆಯು ಆ ನೀಚ ಸೊಸೆಯರ ಮಾತು ಕೇಳಿ ಹಿಂದು ಮುಂದೆ ಯೋಚಿಸದೆ, ಮಲ್ಲಮ್ಮನ ಮೇಲೆ ಸಿಟ್ಟಿಗೆದ್ದು "ಬಡತನವ ಸೋಸಿ ನಾವೆಲ್ಲರು ಗತಿಗೆಟ್ಟು ದುಡಿದುಂಡು, ಈಗೀಗ ಮನೆಯು ಮುಂದಕ್ಕೆ ಬರುತ್ತಲಿದೆ, ಇಂಥ ಸಮಯದಲ್ಲಿ ಈ ಕೆಡುಕಳು ಈ ನೇಮವನ್ನೆಲ್ಲಾ ಎಲ್ಲಿ ಕಲಿತು ಬಂದಳೋ ಎಂದು ಈ ರೀತಿ ಒದರಾಡಿದಳು :—

ಎಲೆ ಮಲ್ಲಿ ಬಿಡು ಮನೆಯ ನಡೆದನವ ಕಾಯಲ್ಕೆ । ಕೆಲಸವಾಗುವು ದಿಲ್ಲ ನಿನ್ನಿಂದ ಮನೆಯೊಳಗೆ । ಕಳೆಯಬೇಡ ಅಡವಿಯೊಳು ದನಗಳಂ ಮೇಯಿಸಿ ನೀರಂ ಕುಡಿಸಿ ದಡ್ಡಿಯಲಿ ॥ ಸಲೆ ಪುಗಿಸಿ ಕರುಗಳಂ ಹುಲಿ ಗಳಿಗೆ ತಿನಿಸದಿರು । ಬಲಿಸು ತಿಪ್ಪೆಯನೆಲ್ಲ ಸಗಣಿಯಂ ಕೂಡಿಟ್ಟು । ಮಲಗದಿರು ಮರದೆಲ್ಲಿಯುಂ ನಿಲ್ಲದಿರು ಜೋಕೆ ನೀನೆಂದು ಘರ್ಜಿಸಿದಳು॥

ಅಂದಿನಿಂದ ಮಲ್ಲಮ್ಮನು ಅತ್ತೆಯ ಆಜ್ಞೆಯನ್ನು ಸಿರದೊಳು ಪೊತ್ತು, ಅಡವಿಗೆ ಹೋಗಿ ದನಗಳಂ ಕಾಯತೊಡಗಿದಳು. ಹೀಗಿರಲು :—

ಅಡವಿಯೊಳು ಬಿಟ್ಟುಡಲು ಮರುಬಟ್ಟೆಯಿಲ್ಲದಿರೆ । ಮಡುವಿನೊಳು ಮುಳುಗಿ ಯುಟ್ಟಿರೆ ಶೀರೆಯಂ ತೊಳೆದು । ಮಿಡಿದೊಣಗ ಹಿಡಿದು ನಸುಹಸಿಯ ನುಟ್ಟುಟ್ಟರ್ಧಚೇಲಮಂ ತೊಳೆದುಗೊಂಡು ॥ ಮಡಿ ನೀರ ತುಂಬಿ ಕೊಡಮಂ ಪೊತ್ತು ಸಂಭ್ರಮದೆ । ನಡೆತಂದು ದಡ್ಡಿಯ ಸಮೀಪದೊಳು ಬೈಲಿನೊಳು । ಗುಡಿಯಿಲ್ಲದಿಹ ಮಲ್ಲಿಕಾರ್ಜುನನ ಸುತ್ತವರಿದುಡುಗಿ ಚಳಿಗೊಟ್ಟು ಬಳಿಕ ॥

ಸಿಡಿಮಿಡಿಯೊಳತ್ತೆ ತನಗೂಟಕೆ ಕೊಟ್ಟ ಗುಸು । ಗಿಡಿದಿರ್ದ ಮುಗ್ಗು
ದುಪ್ಪದ ದೀವಿಗೆಯುನಡ್ಡ । ಗೆಡಹಿದೊಂದೊಡಕ ಹರವಿಯೊಳು
ಪೊತ್ತಿಸಿ ತನ್ನ ಮಹೇಶನಿಗಭಿಷೇಕವೆಸಗಿ । ನಡೆ ಭಸಿತವಂ ಕಾಡ
ಕುಸುಮಂಗಳಂ ಧರಿಸಿ । ಬಿಡದೆ ತಂಗುಳ ಚೂರ ಹಳಸಿದಂಬಲಿಯು
ನಿವೇದಿಸಿ । ಕಡು ನೇಹದಿಂ ನುತಿಸಿ ನಮಿಸಿ ನೆನೆಯುತುಂಬುವ
ನಿಯಮದಿಂದಿರ್ದಳು ॥

ಮಲಗುವಾಸನವಿಲ್ಲ ಹೊದಿವ ಹಚ್ಚಡವಿಲ್ಲ । ತಲೆಗಿಂಬದೆಲ್ಲಿ
ಮತ್ತೊಂದು ಕುಪ್ಪಸವಿಲ್ಲ । ಹೊಳೆವ ಮಂಗಲಸೂತ್ರವಿಲ್ಲ
ದಿನ್ನೊಂದಿಲ್ಲ ಬೇಡಲಿಕೆ ಬಾಯಿಲ್ಲವು ॥ ತಲೆಗೆ ನೇಹಮದಿಲ್ಲ ಮರು
ಗುತಿಪ್ಪವರಿಲ್ಲ । ಪಳಿಯದವರಾರುಮಿಲ್ಲಂ ನಿಲಯದೊಳು ಕೈಗೆ ।
ಬಳೆಗಳಿಲ್ಲೀ ಪರಿಯೊಳಿರ್ದಡಂ ಮುಗ್ಧ ಭಕ್ತೆಯ ಮನಂ ಕದಡಲಿಲ್ಲ॥

ಮಲ್ಲಮ್ಮನು ಉಟ್ಟದನ್ನೇ ಒಗೆದು ಅದನ್ನೇ ಉಡಬೇಕು. ಹಾಸಿಗೆ ಇಲ್ಲ. ಹೊದಿಕೆ ಇಲ್ಲ. ನೆಲವೇ ಹಾಸಿಗೆ. ಆಕಾಶವೇ ಹೊದಿಕೆ. ಮನೆಯವರು ಊಟಕ್ಕೆ ಕೊಡುವದು ತಂಗಳನ್ನ, ಹಳಸಿದ ಅಂಬಲಿ. ಅದನ್ನೇ ತನ್ನ ಇಷ್ಟ ದೇವರಾದ ಚನ್ನಮಲ್ಲಿಕಾರ್ಜುನನಿಗೆ ನಿವೇದಿಸಿ ಉಣ್ಣುತ್ತಿದ್ದಳು. ಆಕೆಯ ಭಕ್ತಿಗೆ **ಶ್ರೀ ಚನ್ನಮಲ್ಲಿಕಾರ್ಜುನನು** ಮೆಚ್ಚಿ ಪ್ರಸನ್ನನಾಗಿದ್ದನು.

ಆ ಅಡವಿಯಲ್ಲಿ ಜಂಗಮರೂಪಿಯಾಗಿ ಪ್ರಸನ್ನನಾದ ಶ್ರೀಮಲ್ಲಿಕಾರ್ಜುನನೊಡನೆ ಮಲ್ಲಮ್ಮನು ಮಾತಾಡುತ್ತಿದ್ದಳು. ಅಂಬಲಿಯನ್ನುಣಿಸುತ್ತಿದ್ದಳು. ಈ ವಾರ್ತೆಯ ಹೇಮರಡ್ಡಿಯ ಸೊಸೆಯರು ತಿಳಿದು, ಅವರು ಮಲ್ಲಮ್ಮನು ಯಾವನೋ ಒಬ್ಬ ಮಿಂಡ ಜಂಗಮನನ್ನು ಇಟ್ಟುಕೊಂಡಿರುವಳೆಂದು, ಅತ್ತೆಯ ಮುಂದೆ ದೂರುಹೇಳಿದರು. ಅತ್ತೆಯು ಸಿಟ್ಟಿಗೆದ್ದು ಮಲ್ಲಮ್ಮನನ್ನು ಮನೆಗೆ ಕರೆಸಿ "ನೀನಾಮಿಂಡನೊಡಗೂಡಿರ್ದೆ" ಪೇಳೆಂದು ಹಿಡಿದೆಳೆದು ಬಡಿದು ಕಾಲಿಲೆ ಒದೆದು ಹೊರನೂಕಿದರು, ಆ ಅತ್ತೆ ಸೊಸೆಯರು. ಅತ್ತ ಮಲ್ಲಮ್ಮನು ಮನದಲ್ಲಿ ಸ್ವಲ್ಪವೂ ಖೇದಗೊಳ್ಳದೆ ಪ್ರಸನ್ನವದನಳಾಗಿ ದನದ ದೊಡ್ಡಿಗೆ ಹೋದಳು.

ಇತ್ತ ಸಾಧ್ವಿಮಣಿಯಾದ ಮಲ್ಲಮ್ಮನಂ ಹೊರದೂಡಿ ಉಣಬೇಕೆಂದು, ಅತ್ತೆಸೊಸೆಯರು ಒಳಗೆ ಬರಲು, ಮಾಡಿದ ಅಡಿಗೆ ಒಂದಿರಲಿಲ್ಲ. ಮಾಡಿಟ್ಟ

ಸಾಮಾನು ಒಂದೂ ಉಳಿದಿದ್ದಿಲ್ಲ. ಪೆಟ್ಟಿಗೆಯಲ್ಲಿದ್ದ ವಸ್ತ್ರಾಭರಣಗಳಿರಲಿಲ್ಲ, ಸಂಪತ್ತೆಲ್ಲಾ ಬೈಲಾಗಿ ಹೋಗಿತ್ತು. ಹಸಿವೆಯಿಂದ ಕಂಗೆಟ್ಟ ಆ ಅತ್ತೆಸೊಸೆಯರು ಹಾಸಿಗೆಯನ್ನು ಹಿಡಿಯಲು, ಮೇಲೆ ಮುನ್ನೂರು ಅರವತ್ತು ರೋಗಗಳು ಬಂದು ಅಪ್ಪಳಿಸಿದವು. ಆ ಸಂಕಟಗಳನ್ನು ತಡೆಯಲಾರದೆ ಅವರು ಹೊಯ್ಕೊಂಡರು. ಬಡಕೊಂಡರು. ಗೋಳಿಟ್ಟರು.

ಆಗ ನಿರಪರಾಧಿಯಾದ ಸತ್ಯ ಶರಣೆಯಾದ ಮಲ್ಲಮ್ಮನನ್ನು ನೋಯಿಸಿದ್ದರಿಂದ ಈ ಪಾಪವು ತಮಗೆ ತಗಲಿತೆಂದು ಅರಿತು, ಮಾವನಾದ ಹೇಮರಡ್ಡಿಯನ್ನು ಕರಕೊಂಡು ಮಲ್ಲಮ್ಮನನ್ನು ಮೊರೆಹೊಕ್ಕರು. 'ತಾಯೀ! ನಿನ್ನನ್ನು ಬೈದೆವು, ಹೊಡೆದೆವು, ಕಾಲಿಲೆ ಒದೆದೆವು, ಅಡವಿಗೆ ಅಟ್ಟಿದೆವು. ಊಟಕ್ಕೆ ಹಳಿಸಿದ ಅಂಬಲಿಯನ್ನು ಕೊಟ್ಟೆವು, ತಲೆಗೆ ಮುಗ್ಗು ತುಪ್ಪವ ಕೊಟ್ಟೆವು, ಬಿಟ್ಟುಡಲು ಸೀರೆಯನ್ನು ಕೊಡಲಿಲ್ಲ. ನೆಲವನ್ನೇ ಹಾಸಿ ಮುಗಿಲನ್ನೇ ಹೊರುವಂತೆ ಮಾಡಿದೆವು. ಸಲ್ಲದ ಸಂಶಯವನ್ನು ಹೊರಸಿದೆವು. ಒಂದಲ್ಲ ಎರಡಲ್ಲ ಅನಂತರೀತಿಯಿಂದ ನಾವು ನಿನ್ನನ್ನು ಬಳಲಿಸಿದೆವು. ನಾವು ಬಹು ಪಾಪಿಗಳು. ನಮ್ಮ ತಪ್ಪನ್ನು ಕ್ಷಮಿಸೆಂದು ಬಿದ್ದು ಬೇಡಿಕೊಂಡರು.

ಮೊದಲೇ ಮುನಿಸಿಲ್ಲದ ಮಲ್ಲಮ್ಮನು ಅವರನ್ನು ಸಂತೈಸಿ, ಈ ಮಲ್ಲಿಕಾರ್ಜುನನೇ ನಮ್ಮ ಕುಲದೈವ. ಈತನನ್ನು ನಂಬಿ ಪೂಜಿಸಿರಿ, ಇವನೇ ಜಂಗಮಮೂರ್ತಿಯಾದ ಮಲ್ಲಯ್ಯನು. ಅಂದು ನಮ್ಮ ಮನೆಗೆ ಭಿಕ್ಷಕೆ ಬರಲು ನೀವು ನೀಡದೆ ಹೊಡೆದಟ್ಟಿದಿರಿ. ಇನ್ನು ನೀವು ನಿಮ್ಮ ಮದವನ್ನೆಲ್ಲಾ ಬಿಟ್ಟು, ಸುಜನರ ಸಂಗದಿಂದ ಬಾಳಿರೆಂದು ,ಅವರನ್ನು ನಿಜಮಂದಿರಕ್ಕೆ ಕಳಿಸಿ ಕೊಟ್ಟಳು.

ಅವರು ಮನೆಗೆ ಬರುವದರೊಳಗೆ ಮೊದಲಿನಂತೆ ತಮ್ಮ ಮನೆ ಐಶ್ವರ್ಯದಿಂದ ತುಂಬಿ ತುಳುಕುತ್ತಿತ್ತು. ಅಂದಿನಿಂದ ಅವರು ಮಲ್ಲಿಕಾರ್ಜುನನಲ್ಲಿಯೂ, ಮಲ್ಲಮ್ಮನಲ್ಲಿಯೂ, ಭಕ್ತಿಯನ್ನು ಇಟ್ಟರು. ಮಲ್ಲಮ್ಮನನ್ನು ತಮ್ಮ ಮನೆದೇವಿಯಂತೆ ತಿಳಿದರು. ಮಲ್ಲಮ್ಮನು ಮನೆಯವರಿಗಷ್ಟೇ ಅಲ್ಲ; ಹೊರಗಿನವರಿಗೂ ಮನೆದೇವತೆಯಾದಳು. ಹರಿದೊಗೆದ ಎಷ್ಟೋ

ದಾಂಪತ್ಯಗಳನ್ನೂ ತನ್ನ ಬುದ್ಧಿವಾದಗಳಿಂದ ಕೂಡಿಸಿದಳು. ಮಣ್ಣು ಬಿತ್ತಿ ಹೊನ್ನು ಬೆಳೆದಳು. ಕಾಳಿದಾಸನಿಗೆ ಕಣ್ಣನ್ನು ಕೊಟ್ಟಳು. ಹೀಗೆ ಅನಂತ ಮಹಿಮೆಗಳನ್ನು ಬೀರಿರುವಳು.

ಮುಂದೆ ಕೆಲಕಾಲದ ಮೇಲೆ ಮಾವನ ಸಹಾಯವನ್ನು ತೆಗೆದುಕೊಂಡು ಬೈಲಲ್ಲಿದ್ದ ಶ್ರೀ ಚನ್ನಮಲ್ಲಿಕಾರ್ಜುನನಿಗೆ ಗುಡಿಯನ್ನು ಕಟ್ಟಿಸಿದಳು. ಒಂದು ದಿನ ಕಾಲನೇಮುವನ್ನು ಅನುಸರಿಸಿ ತನ್ನ ಬಂಧು ಬಳಗದವರನ್ನೂ, ಸುತ್ತಲೂ ಸಾಡಜನರನ್ನೂ ಕರೆಸಿಕೊಂಡು "ಸಿರಿಗೆ ಹಿಗ್ಗದಿರಿ, ದಾನದೊಳು ಹಿಂದಾಗದಿರಿ, ಸಜ್ಜನರಾಗಿ ಬಾಳಿರಿ, ದೇವರಲ್ಲಿ ಭಕ್ತಿಯನ್ನಿಡಿರಿ," ಎಂದು ಬುದ್ಧಿವಾದಗಳನ್ನು ಹೇಳಿ ಶ್ರೀ ಚನ್ನಮಲ್ಲಿಕಾರ್ಜುನನಲ್ಲಿ ಅಂತರ್ಧಳಾದಳು.

ಅಂದು ಅಲ್ಲಿ ನೆರೆದವರೆಲ್ಲರೂ ಅದನ್ನು ಕಂಡು **"ಜಯ ವರದೆ ಮಲ್ಲಮ್ಮಾಂಬೆ"** ಎಂದು ಕೊಂಡಾಡಿದರು.

---

# ಹೆಳವನಕಟ್ಟೆ ಗಿರಿಯಮ್ಮ

(೧೭೦೦)

ಧಾರವಾಡ ಜಿಲ್ಹೆಯ ರಾಣೇಬೆನ್ನೂರೆಂಬ ಊರಲ್ಲಿ ಬಿಷ್ಟಪ್ಪ ಜೋಯಿಸರೆಂಬ ಗೃಹಸ್ಥರು ವಾಸವಾಗಿದ್ದರು. ಇವರು ಶ್ರೀ ಮೈಲಾರಲಿಂಗನ ಭಕ್ತವರ್ಗಕ್ಕೆ ಸೇರಿದ ಅರವತ್ತೊಕ್ಕಲ ದೇಶಸ್ಥ ಬ್ರಾಹ್ಮಣ ವಂಶದವರು. ಇವರಿಗೆ ದೇವರ ಕೃಪೆಯಿಂದ ಗಿರಿಯಮ್ಮನೆಂಬ ಮಗಳು ಜನಿಸಿದಳು. ಗಿರಿಯಮ್ಮನಿಗೆ ಬಾಲ್ಯದಿಂದಲೂ ದೇವರಲ್ಲಿ ಭಕ್ತಿಯು ಹುಟ್ಟಿ ಬೆಳೆಯಿತು. ಈಕೆಯ ಚಿಕ್ಕತನದ ಆಟ-ಪಾಟಗಳೂ ದೇವರನ್ನೇ ಸಂಬಂಧಿಸಿದುವು ಆಗಿರುತ್ತಿದ್ದವು. ಈಕೆಯು ರಾಮಾಯಣ, ಮಹಾಭಾರತ ಮೊದಲಾದ ಪುರಾಣಗಳನ್ನೂ, ಜೈಮಿನಿ ಮೊದಲಾದ ಕನ್ನಡ ಕಾವ್ಯಗಳನ್ನೂ ಬಹಳ ಆಸ್ಥೆಯಿಂದ ಆಲಿಸುತ್ತಿದ್ದಳು. ಈಕೆಯು ತಕ್ಕಮಟ್ಟಿಗೆ ಓದು ಬರಹಗಳನ್ನು ಕಲಿತಳು. ಈಕೆಯು ಇನ್ನೂ ಸಣ್ಣವಳಿರುವಾಗ ಈಕೆಯ ತಂದೆ ತಾಯಿಗಳು ತೀರಿಕೊಂಡರು !

ಮುಂದೆ ಈಕೆಯ ಆಪ್ತರು ಈಕೆಯನ್ನು ಮದುವೆ ಮಾಡಿಕೊಟ್ಟರು. ಹರಿಹರದಿಂದ ಹನ್ನೆರಡು ಮೈಲಿರುವ ಮಲೆಬೆನ್ನೂರು ಶಾನುಭೋಗ ತಿಪ್ಪರಸನು ಈಕೆಯನ್ನು ವರಿಸಿದನು. ಗಿರಿಯಮ್ಮನು ಅತ್ತೆಯ ಮನೆಗೆ ಹೋದಳು. ಆದರೆ ಈಕೆಯ ವೃತ್ತಿಯು ದಾಂಪತ್ಯ ಸುಖಕ್ಕೆ ಪೂರ್ಣ ಹೊರತಾಗಿತ್ತು. ಮನಸ್ಸಿನಿಂದಲೂ, ದೇಹದಿಂದಲೂ ಈಕೆಯು ಸಂಸಾರದಲ್ಲಿ ತೊಡಗಲಿಲ್ಲ. ಅದಕ್ಕಾಗಿ ಈಕೆಯನ್ನು ಒಲಿಸಲು ಮಾಡಿದ ಪ್ರಯತ್ನಗಳು ವ್ಯರ್ಥವಾದುವು. ಕೊನೆಗೆ ತಿಪ್ಪರಸನು ಈಕೆಯ ಗೊಡವೆಯನ್ನು ಬಿಟ್ಟು, ಇನ್ನೊಂದು ಮದುವೆಯನ್ನು ಮಾಡಿಕೊಂಡನು. ಈಕೆಯು ಅತ್ತೆಯ

ಮನೆಯಲ್ಲಿಯೇ ಇದ್ದುಕೊಂಡು ತನ್ನ ದೈವಭಕ್ತಿಯನ್ನು ಮುಂದುವರಿಸಿದಳು. ಮಲೆಬೆನ್ನೂರು ಬಳಿಯಲ್ಲಿರುವ **ಹೆಳವನಕಟ್ಟೆ ರಂಗನಾಥನು** ಈಕೆಯ ಉಪಾಸನಾ ಮೂರ್ತಿಯಾದನು.

ಈಕೆಯ ಗಂಡನ ಮನೆತನವು ದೊಡ್ಡ ಕುಟುಂಬವಾಗಿದ್ದಿತು. ಮನೆಯಲ್ಲಿ ಅತ್ತೆ, ಮಾವ, ಅತ್ತಿಗೆ, ನಾದಿನಿಯರು ಇದ್ದರು. ಈಕೆಯ ಬಗೆಗೆ ಅವರು ಸದ್ಭಾವನೆಯುಳ್ಳವರಾಗಿರಲಿಲ್ಲ. ಮೇಲಾಗಿ ಈಕೆಯ ರೀತಿಯೇ ಲೋಕವಿಲಕ್ಷಣವಾದುದು. ವಿಚಿತ್ರವಾದ ಈಕೆಯ ವರ್ತನೆಯನ್ನು ಕಂಡು ಅವರು ಅಸಡ್ಡೆ ಮಾಡುತ್ತಿದ್ದರು. ಗಿರಿಯಮ್ಮನು ದಿನಾಲು ಒಬ್ಬಳೇ ಹೆಳವನಕಟ್ಟೆಗೆ ಹೋಗಿ ಬರುತ್ತಿರುವದು ಅವರಿಗೆ ಸೇರಿಕೆಯಾಗಲಿಲ್ಲ. ಮನೆಯಲ್ಲಿಯೂ, ಊರಲ್ಲಿಯೂ ಈಕೆಯ ಆಚರಣೆಯ ಬಗೆಗೆ ಇಲ್ಲದ ಸಲ್ಲದ ಕುಕಲ್ಪನೆಗಳು ಹಬ್ಬಿದವು.

ಆದರೆ ಗಿರಿಯಮ್ಮನು ಮಹಾ ದಿವ್ಯ ಜ್ಞಾನಿಯು. ಒಮ್ಮೆ ಆಕೆಗೂ ಅವರ ಮಾವನಿಗೂ ನಡೆದ ಒಂದು ಪ್ರಸಂಗದಿಂದ ಆಕೆಯ ದಿವ್ಯ ಜ್ಞಾನದ ಬೆಳಕು ತಿಳಿಯುವದು.

ಒಂದು ದಿನ ಗಿರಿಯಮ್ಮನ ಮಾವನು ನೆರೆಹಳ್ಳಿಗೆ ಹೋಗಬೇಕೆಂದು, ಹರಿದ ತನ್ನ ಕಾಲಮುರಿಗಳನ್ನು ದುರಸ್ತ ಮಾಡಲು ಕೊಟ್ಟಿದ್ದನು. ಮರುದಿನ ನಸುಕಿನಲ್ಲಿ ಎದ್ದು ಸ್ನಾನಮಾಡಿ ದೇವತಾರ್ಚನೆಗೆ ಕುಳಿತಾಗ, ಮಾದಿಗನು ತನ್ನ ಕಾಲಮುರಿಗಳನ್ನು ದುರಸ್ತು ಮಾಡಿದನೋ? ಇಲ್ಲವೋ? ಎಂದು ಮನದಲ್ಲಿ ಚಿಂತಿಸುತ್ತಿದ್ದನು. ಅಷ್ಟರಲ್ಲಿ ಆ ಮಾದಿಗನು ಬಂದನು. ಆಗ ಮುಂದಿನ ಬಾಗಿಲಲ್ಲಿ ಗಿರಿಯಮ್ಮನು ಕಸ ಹೊಡೆಯುತ್ತಿದ್ದಳು. ಅಮ್ಮನವರೇ, ನಿಮ್ಮ ಮಾವನವರು ಮನೆಯಲ್ಲಿರುವರೇ ? ಎಂದು ಕೇಳಿದನು. ಅದಕ್ಕೆ ದಿವ್ಯಜ್ಞಾನಿಯಾದ ಗಿರಿಯಮ್ಮನು "ಮಾವನವರು ಮನೆಯಲ್ಲಿಲ್ಲ, ಮಾದರಗೇರಿಗೆ ಹೋಗಿರುವ" ರೆಂದು ಹೇಳಿದಳು. ಈ ಮಾತನ್ನು ಕೇಳಿದ ಮಾವನು ಸಿಟ್ಟಿಗೆದ್ದು, ನಾನು ದೇವರಮನೆಯಲ್ಲಿ ದೇವರ ಪೂಜೆಗೆ ಕೂತಿರುವದನ್ನು ನೀನು ನೋಡಿಯೂ ಕೂಡಾ ಹೀಗೆ ಮಾತಾಡಬೇಕೆಂದರೆ, ನಿನ್ನ ಮೈಯಲ್ಲಿ ಸೊಕ್ಕೆಷ್ಟು? ಎಂದು ಬೈದನು.

ನೀನು ಅಂಥಾ ದಿವ್ಯಜ್ಞಾನಿಯಾದರೆ ಈ ನನ್ನ ಬಲಗೈ ಮತ್ತು ಎಡಗೈಗಳಲ್ಲಿರುವದೇನು ? ಹೇಳೆಂದು, ಒಂದು ಕೈಯಲ್ಲಿ ಬಿಲ್ವಪತ್ರಿಯನ್ನೂ ಇನ್ನೊಂದು ಕೈಯ್ಯಲ್ಲಿ ತುಳಸೀಪತ್ರಿಯನ್ನೂ ಹಿಡಿದು ಕೇಳಿದನು. ಆಗ ಗಿರಿಯಮ್ಮನು ಆ ವಿಷಯವಾಗಿ ಹಾಡುಕಟ್ಟಿ ಹಾಡಿರುವಳು. ಮಾವನು ಇಂಥಾ ವಸ್ತುವನ್ನೇ ಕೈಯ್ಯಲ್ಲಿ ಹಿಡಿದಿರುವನೆಂದು ಹೇಳಿದಳು. ಮಾವನು ಅಚ್ಚರಿಪಟ್ಟನು. ದುರ್ದೈವದಿಂದ ಆಕೆಯ ಹಾಡುಗಳು ಒಂದೂ ನಮಗೆ ಸಿಗಲಿಲ್ಲ. ಸಿಕ್ಕಿದ್ದರೆ ಆ ಹಾಡುಗಳ ಸವಿಯನ್ನು ಓದುಗರು ನೋಡುತ್ತಿದ್ದರು.

ಗಿರಿಯಮ್ಮನ ಶುದ್ಧವಾದ ಚಾರಿತ್ರ್ಯ, ಅಸಾಮಾನ್ಯವಾದ ಸಹನ, ಅಚಲವಾದ ನಿಷ್ಠೆ, ಉತ್ಕಟವಾದ ಭಕ್ತಿ, ಇವುಗಳು ಕೊನೆಗೆ ಪ್ರಭಾವ ಶಾಲಿಯಾದವು. ಈಕೆಯ ಅಲೌಕಿಕವಾದ ಗುಣಗಳು ಮೆಲ್ಲ ಮೆಲ್ಲನೆ ತಮ್ಮ ಬೆಳಕನ್ನು ಬೀರಿದವು. ಈಕೆಯು ದೇವಾಂಶಳೆಂದೂ ಅದ್ಭುತ ಸಾಮರ್ಥ್ಯ ಸಂಪನ್ನೆಯಾದ ದೇವತೆಯೆಂದೂ, ಜನರು ಈಕೆಯನ್ನು ಆದರಿಸಲಾರಂಭಿ ಸಿದರು. ಈಕೆಯ ವಿಷಯದಲ್ಲಿ ಬಗೆಬಗೆಯ ಸೋಜಿಗದ ಕತೆಗಳು ಭಾವಿಕ ಜನಗಳಲ್ಲಿ ಹಬ್ಬಿಕೊಂಡವು. ಪವಾಡಗಳು ಹುಟ್ಟಿದವು. ಭಾವನೆಯಂತೆ ಫಲ ಎಂಬಂತೆ ಕೆಲವರಿಗೆ ಅಂತಹ ಅನುಭವಗಳೂ ಬಂದುವು.

ಈಕೆಯು ಯಾರೂ ಅರಿಯದಂತೆ ತನ್ನ ಎಡೆಯಲ್ಲಿಯ ತುಪ್ಪದಿಂದ ದಿನಾಲು ದೇವರಿಗೆ ದೀಪವನ್ನು ಹಚ್ಚುತ್ತಿದ್ದಳು ವೆಂಕಟೇಶನ ಅಪ್ಪಣೆಯಂತೆ ಆದರ ಕಾಡಿಗೆಯನ್ನು ತೊಡೆದುಕೊಂಡ ಪುಂಗನೂರ ಅರಸನಿಗೆ ಒಂದು ಕಣ್ಣು ಬಂದಿತಂತೆ, ಈಕೆಯು ನಿತ್ಯವೂ ಮಜ್ಜಿಗೆಯನ್ನು ಕಡೆಯುವಾಗ ಗೋಪಾಲ ಕೃಷ್ಣನು ಕುಣಿಕುಣಿಯುತ್ತ ಬಂದು ಬೆಣ್ಣೆಯನ್ನು ತಿನ್ನುತ್ತಿದ್ದ ನಂತೆ.

ಒಂದು ದಿನ ಈಕೆಯ ಮಾವನು ಗಿರಿಯಮ್ಮನನ್ನು ಪರೀಕ್ಷಿಸಲು, ಗುಪ್ತವಾಗಿ ಹೆಳವನಕಟ್ಟೆಗೆ ಹೋಗಿ ಒಂದು ಮರದ ಮೇಲೆ ಕೂತು ನೋಡಿದ ಪ್ರಸಂಗವನ್ನು ಇಲ್ಲಿ ವಿವರಿಸಿದೆ. ಒಂದು ದಿನ ಗಿರಿಯಮ್ಮನು ನಸುಕಿನಲ್ಲಿ ಎದ್ದು ಶ್ರೀರಂಗನಾಥನ ದರ್ಶನಕ್ಕೆ ಹೋಗುವಾಗ, ಅವಸರ

ದಲ್ಲಿ ಮೈ ಮೇಲೆ ಎಚ್ಚರವಿಲ್ಲದೆ ಗುಡಿಯ ಎದುರಿನ ಕಲ್ಲನ್ನು ಎಡವಿ ನೆಲಕ್ಕೆ ಅಪ್ಪಳಿಸಿದಳು. ಆಗ ಶ್ರೀ ರಂಗನಾಥನು ಆಕೆಯನ್ನು ಎತ್ತಿ ಮೈದಡವಿದನು. ಈ ಅದ್ಭುತವಾದ ಪ್ರಸಂಗವನ್ನು ಮರದ ಮೇಲೆ ಅಡಗಿಕೊಂಡು ನೋಡು ತ್ತಿದ್ದ ಮಾವನು ಕಂಡು ಆಶ್ಚರ್ಯ ಪಟ್ಟನು. ಆಗ ಕೆಳಗೆ ಇಳಿದು ಬಂದು "ಅಮ್ಮಾ, ಗಿರಿಯಮ್ಮಾ ನೀನು ನಿಜವಾಗಿಯೂ ಪುಣ್ಯವಂತೆ, ಪರಮ ಭಕ್ತೆ. ನಿನ್ನ ಯೋಗ್ಯತೆ ದೊಡ್ಡದು. ಸಾಕ್ಷಾತ್ ಶ್ರೀ ರಂಗನಾಥಸ್ವಾಮಿಯು ನಿನಗೆ ಒಲಿದು ಬಿಟ್ಟಿದ್ದಾನೆ. ನಾನು ಎಲ್ಲವನ್ನು ಇದೀಗ ಕಣ್ಣಾರೆ ನೋಡಿ ದೆನು. ಎಲ್ಲರಂತೆ ನಾನು ತಿಳಿಯದೇ ನಿನ್ನಲ್ಲಿ ಸಂಶಯನ್ನು ತಾಳಿದುದಕ್ಕೆ ನನ್ನನ್ನು ದಯಮಾಡಿ ಕ್ಷಮಿಸೆಂದು ಬೇಡಿಕೊಂಡನು.

ಮಾವನವರೇ, ತಾವು ಹಿರಿಯರು. ಕಿರಿಯಳಾದ ನನ್ನಲ್ಲಿ ತಾವು ಕ್ಷಮೆಯನ್ನು ಬೇಡುವದುಂಟೇ? ಎಲ್ಲರ ತಪ್ಪುಗಳನ್ನು ಹೊಟ್ಟೆಯಲ್ಲಿ ಹಾಕಿಕೊಳ್ಳಲು ಈ ರಂಗನಾಥನೇ ಸಮರ್ಥನಿದ್ದಾನೆ. ನಾನು ನಿಮ್ಮ ಮುಂದಿನ ಕೂಸು, ನಿಮಗೆ ನನ್ನ ಅನಂತ ಪ್ರಣಾಮಗಳು. ಹೀಗೆಂದು ನುಡಿದಳು.

ಅಂದು ಗಿರಿಯಮ್ಮನ ಜೀವನದಲ್ಲಿಯ ಕ್ರಾಂತಿಕಾರಕವಾದ ಪ್ರಸಂಗ, ಅಂದು ಆಕೆಯಲ್ಲಿ ಹುದುಗಿದ ಒಂದು ಶಕ್ತಿಯು ಸ್ಫುರಣಗೊಂಡಿತು. ಅದು ಮಾವನ ಜ್ಞಾನೋದಯದ ಸನ್ನಿವೇಶವು. ಅಂದು ಗಿರಿಯಮ್ಮನು ಜಗತ್ತಿಗೆ ಬೆಳಕಾಗುವ ದಿವಸ. ಆಕೆಯ ಪವಿತ್ರವಾದ ಹೃದಯದಲ್ಲಿ ಕಾವ್ಯದೇವಿಯು ಪ್ರಕಟವಾಗಿದ್ದಳು. ಆಕೆಯ ವಾಣಿಯಿಂದ ಭಕ್ತಿಪ್ರದವಾದ ರಸವತ್ತಾದ ಸರಸವಾದ ಕವನಗಳು, ಮಧುರವಾದ ದೇವರ ನಾಮಗಳು, ಧಾರೆಧಾರೆಯಾಗಿ ಹೊರಹೊಮ್ಮತೊಡಗಿದವು. ಆಕೆಯ ಕವನಗಳಿಗೆ ಹೆಳವನಕಟ್ಟೆ ರಂಗನಾಥ ಎಂಬುದು ಅಂಕಿತವಾಗಿದೆ.

ಗಿರಿಯಮ್ಮನ ಯೋಗ್ಯತೆಯನ್ನರಿತ ಮಾವನು, ಗಂಡನು ಆಕೆಯೊಡನೆ ಮರ್ಯಾದೆಯಿಂದ ನಡೆದುಕೊಳ್ಳುತ್ತಿದ್ದರು. ಆದರೆ ಮಿಕ್ಕವರು ಮಾತ್ರ ಹಾಗೆ ಇರಲಿಲ್ಲ. ಈಕೆಯು ಹುಚ್ಚಿಯೆಂದು ಪರಿಪರಿಯಿಂದ ಗೋಳಾಡಿಸು

ತ್ತಿದ್ದರು. ಆದರೂ ಈಕೆಯು ಆ ಕಿರುಕುಳಗಳನ್ನೆಲ್ಲ ಶಾಂತವಾಗಿ ಸಹಿಸುತ್ತ, ಉದಾರ ಮನಸ್ಸಿನಿಂದ ತನ್ನ ಕರ್ತವ್ಯ ಪಥವನ್ನು ಅಖಂಡವಾಗಿ ಪಾಲಿಸಿದಳು. ಗಿರಿಯಮ್ಮನು ತನ್ನ ಜೀವನವನ್ನೆಲ್ಲ ಪರಮಾತ್ಮನ ಚಿಂತನೆಯಲ್ಲಿಯೂ ಪರೋಪಕಾರದಲ್ಲಿಯೂ ಕಳೆದಳು ಈಕೆಯ ಚರಿತ್ರೆಯು ಬಹುಜನರಿಗೆ ಮಾರ್ಗದರ್ಶಕವಾಯಿತು. ಸಂಸಾರ ತಾಪಗಳಿಂದ ಬೆಂದು ಬಳಲಿದ ಅನೇಕ ಜನರು ಆಕೆಯಿಂದ ಆಶೆಯ ಅಮರ ಸಂದೇಶವನ್ನು ಪಡೆದರು. ಪ್ರಪಂಚದ ಗಾಯಗಳಿಂದ ನೊಂದ ಹಲವು ಜೀವಿಗಳಿಗೆ ಆಕೆಯು ಸಮಾಧಾನವನ್ನೀಯುವ ಶಾಂತಿಮೂರ್ತಿಯಾದಳು. ಆಕೆಯು ಅನೇಕ ತೀರ್ಥ ಕ್ಷೇತ್ರಗಳನ್ನು ಸಂಚರಿಸಿ ಪವಿತ್ರವಾದ ತನ್ನ ಆತ್ಮವನ್ನು ಮತ್ತಿಷ್ಟು ಪವಿತ್ರಗೊಳಿಸಿದಳು. ಅಂತಃಸ್ಫೂರ್ತಿಗಳಿಂದ ಅಲ್ಲಲ್ಲಿಯ ದೇವರ ಮಹಿಮೆಗಳನ್ನು ಕವನರೂಪವಾಗಿ ಕೊಂಡಾಡಿರುವಳು.

ಈ ಮೇರೆಗೆ ಗಿರಿಯಮ್ಮನು ಪರಮಾತ್ಮನಿಗಾಗಿಯೇ ತನ್ನನ್ನು ಮೀಸಲಾಗಿರಿಸಿ, ರಂಗನಾಥನ ಸೇವೆಯಲ್ಲಿಯೂ, ಜನಸೇವೆಯಲ್ಲಿಯೂ ತನ್ನ ಜೀವನವನ್ನು ಸವಿಸಿದಳು. ಒಂದುದಿನ ಈ ಭಕ್ತಿಯೋಗಿನಿಯು ಪ್ರಪಂಚದ ತೊಡರನ್ನು ಸುಲಭವಾಗಿ ದಾಟಿ, ಇಹಲೋಕವನ್ನು ಬಿಟ್ಟು ಪರಲೋಕದಲ್ಲಿ ಚಿರಶಾಂತಿಯನ್ನು ಹೊಂದಿದಳು.

---

# ಮೀರಾಬಾಯಿ

ಈ ಪರಮ ಸುಂದರಿಯಾದ ಸಾಧ್ವಿಮಣಿಯು ರಜಪುತಾನದಲ್ಲಿರುವ ಮೇವಾಡದ ರಾಠೋರನಾದ ರಾಣಾ ರತನಸಿಂಹನ ಮಗಳು. ಕ್ರಿ ಶ. ೧೫೪೦ ರಲ್ಲಿ ಹುಟ್ಟಿದಳು. ಇವಳ ಪವಿತ್ರತೆಯನ್ನು ಅನೇಕ ದೇಶದವರು ಕೊಂಡಾಡುತ್ತಿರುವರು.

ಚಿಕ್ಕಂದಿನಲ್ಲಿಯೇ ಮೀರಾಬಾಯಿಯ ಒಲವು ಬೇರೆ ತರಹದ್ದಾಗಿತ್ತು. ಇವಳು ನಾಲ್ಕೈದು ವರ್ಷದವಳಿದ್ದಾಗ ಒಂದು ದಿನ ಅರಮನೆಯ ಮುಂದೆ, ಒಂದು ಮದುವೆಯ ಮೆರವಣಿಗೆಯು ಸಾಗಿತ್ತು. ಅರಮನೆಯ ಸ್ತ್ರೀಯರೆಲ್ಲರೂ ಆ ಮೆರವಣಿಗೆಯನ್ನು ನೋಡುತ್ತಿದ್ದಾಗ, ಮೀರಾಬಾಯಿಯ ತಾಯಿಯು ಕೃಷ್ಣ ದೇವರನ್ನು ಪೂಜಿಸುವದಕ್ಕೋಸ್ಕರ ಒಳಗೆ ಹೋದಳು. ಮೀರಾಬಾಯಿಯೂ ತಾಯಿಯನ್ನು ಹಿಂಬಾಲಿಸಿದಳು. ಅವರಿಬ್ಬರೂ ಆ ಕೃಷ್ಣದೇವರ ಮುಂದೆ ಕೂತಿರಲು, ಆ ಚಿಕ್ಕ ಮಗಳು ಮೀರಾಬಾಯಿಯು ತಾಯೀ! "ನನ್ನ ಗಂಡನಾರು ?" ಎಂದು ಪ್ರಶ್ನೆ ಮಾಡಿದಳು. ಅದಕ್ಕೆ ತಾಯಿಯು ಕೃಷ್ಣನ ಪ್ರತಿಮೆಯ ಕಡೆಗೆ ಬೊಟ್ಟು ಮಾಡಿ, ಈತನೇ ನಿನ್ನ ಗಂಡನು ಎಂದು ಸಹಜವಾಗಿ ಹೇಳಿದಳು.

ಆ ಕ್ಷಣವೇ ಮೀರಾಕುವರಿಯು "ಕೃಷ್ಣನೇ ತನ್ನ ಗಂಡನೆಂದು ನಿಶ್ಚಯವಾಗಿ ತಿಳಿದು, ನಾಚಿಕೆಯಿಂದ ತಲೆಯ ಬಗ್ಗಿಸಿ, ಮುಖವನ್ನು ಸೆರಗಿನಿಂದ ಮರೆಮಾಡಿಕೊಂಡಳು. ಅಂದಿನಿಂದ ಆಕೆಯು ಆ ಕೃಷ್ಣಮೂರ್ತಿಯ ಮೇಲೆ ತನ್ನ ಪತಿಭಕ್ತಿಯನ್ನಿರಿಸಿದಳು. ಕಡೆಗೂ ಆಕೆಯ ಒಲವು ಹಾಗೆಯೇ ಉಳಿಯಿತು.

ಈಕೆಯು ತಾರುಣ್ಯವತಿಯಾದ ಮೇಲೆ ಆಕೆಯ ಮಾತಾ-ಪಿತೃಗಳೂ ಚಿತ್ತೂರು ರಾಜ್ಯಕ್ಕೆ ಬಾಧ್ಯನಾದ ಕುಂಭಸಿಂಗ ಮಹಾರಾಜನಿಗೆ ಮೀರಾ

ಬಾಯಿಯನ್ನು ಕೊಟ್ಟು ವಿವಾಹ ಮಾಡಿದರು. ಮೀರಾಬಾಯಿಯು ಬಹು ಚಲುವೆ. ಅದಕ್ಕೆ ತಕ್ಕಂಥ ವಿದ್ಯೆಯನ್ನೂ, ಬುದ್ಧಿಯನ್ನೂ, ಕವಿತಾಶಕ್ತಿಯನ್ನೂ ಹೊಂದಿದ್ದಳು. ಪರಮಾತ್ಮನಲ್ಲಿ ಜ್ಞಾನ, ಭಕ್ತಿ, ವೈರಾಗ್ಯಗಳುಂಟಾಗಿದ್ದರಿಂದ ಆಕೆಯ ಕವಿತೆಗಳೂ ಪರಮಾರ್ಥಿಕವಾಗಿದ್ದವು. ಆಕೆಯ ಕವಿತೆಗಳೂ ನಮಗೆ ಎಲ್ಲಿಯೂ ಸಿಕ್ಕಿಲ್ಲ. ಆಕೆಯು ಉಪದೇಶಿಸಿದ ಕೆಲವು ಮಾತುಗಳು ಮಾತ್ರ ಈ ಪ್ರಕಾರ ಸಿಕ್ಕಿವೆ.

**ಸ್ನಾನದಿಂದ ಮುಕ್ತಿಯಾಗುತ್ತಿದ್ದರೆ ಜಲಚರಗಳಿಗೂ, ಮೌನದಿಂದ ಮುಕ್ತಿಯಾಗುತ್ತಿದ್ದರೆ ಮೃಗಜಂತುಗಳಿಗೂ, ಅನ್ನಹಾರ ಬಿಟ್ಟು ಮುಕ್ತಿಯಾಗುತ್ತಿದ್ದರೆ ಸರ್ಪಾದಿಗಳಿಗೂ, ಪರ್ಣಾದಿಗಳ ತಿಂದು ಮುಕ್ತಿಯಾಗುತ್ತಿದ್ದರೆ ಕಪಿ ಆಡುಗಳಿಗೂ, ಮುಕ್ತಿಯಾಗುತ್ತಿತ್ತು.**

ಆದರೆ ಅವೆಲ್ಲಾ ಸುಳ್ಳು, ಅಕರ್ಮವನ್ನು ತ್ಯಜಿಸಿ ಸಕರ್ಮವನ್ನು ಮಾಡುತ್ತಾ, ತ್ರಿಕರ್ಣಶುದ್ಧಿಯಾಗಿ ಭಕ್ತಿಯಿಂದ ಪರಮಾತ್ಮನನ್ನು ನೆನೆದು, ಆತನ ಪಾದದಲ್ಲಿ ಎರಕಗೊಳ್ಳುವದು ಮುಕ್ತಿ.

ಮೀರಾಬಾಯಿಯು ಪತಿ ಸೇವೆಯನ್ನು ಮರೆತವಳಲ್ಲ. ಪತಿಭಕ್ತಿ ಶಿರೋಮಣಿಯು. ಪತಿಯಾಜ್ಞೆಯನ್ನು ಪಡದೇ ಗೋಕುಲ ಬೃಂದಾವನಕ್ಕೆ ಶ್ರೀ ಕೃಷ್ಣನ ದರ್ಶನಕ್ಕೆ ಸಖೀ ಜನರೊಡನೆ ಹೋಗಿಬರುತ್ತಿದ್ದಳು. ರಾಜನು ತನ್ನ ಧರ್ಮಪತ್ನಿಯ ದೇವರ ಮೇಲಿನ ಭಕ್ತಿಯನ್ನು ಕಂಡು ಅರಮನೆಯಲ್ಲಿಯೇ ಶ್ರೀ ಕೃಷ್ಣಪರಮಾತ್ಮನ ಮೂರ್ತಿ ಸ್ಥಾಪನ ಮಾಡಿಸಿ, ವಿಶಾಲವಾದ ದೇವಾಲಯವನ್ನು ಕಟ್ಟಿಸಿಕೊಟ್ಟನು. ಇದರಿಂದ ಮೀರಾಬಾಯಿಯು ಪರಮಾನಂದ ಭರಿತಳಾಗಿ ಶ್ರೀ ಕೃಷ್ಣನ ಸೇವೆ, ಭಜನೆಯಲ್ಲಿ, ತಲ್ಲೀನಳಾದಳು. ಮಹಾಮಹಾ ಸಾಧು ಸತ್ಪುರುಷರೂ, ಮಹಿಳೆಯರೂ ಬಂದು ಮೀರಾಬಾಯಿಯ ದರ್ಶನ, ಅಮೃತವಾಣಿಯನ್ನು ಸವಿದು ಕೊಂಡಾಡಲಿಕ್ಕೆ ಹತ್ತಿದರು.

ಮೀರಾಬಾಯಿಯ ಈ ಖ್ಯಾತಿಯು ಎಲ್ಲೆಲ್ಲಿಯೂ ಹರಡಿತು. ಮೊಗಲ್ ಚಕ್ರವರ್ತಿಯಾದ ಅಕಬರನು ಆಕೆಯನ್ನು ನೋಡಿ ಆನಂದ

ಪಡಬೇಕು, ಸಾಧ್ಯವಾದರೆ ತನ್ನ ಪ್ರೇಮದ ಬಲೆಗೆ ಸಿಕ್ಕಿಸಿಕೊಳ್ಳಬೇಕೆಂಬ ದುರುದ್ದೇಶದಿಂದ, ಜೊತೆಗೊಬ್ಬ ಸಂಗೀತ ವಿಶಾರದನನ್ನು ಕರೆದುಕೊಂಡು, ಇಬ್ಬರು ಸಾಧುವೇಷಗಳನ್ನು ಧರಿಸಿಕೊಂಡು, ಮೀರಾಬಾಯಿಯ ಅಂತಃಪುರದ ಗೋಕುಲ ವೃಂದಾವನಕ್ಕೆ ಬಂದರು. ಆಗ ಬಹು ರೂಪವತಿಯಾದ ಮೀರಾಬಾಯಿಯು ಶ್ರೀ ಕೃಷ್ಣನ ಮುಂದೆ ಭಕ್ತಿರಸ ಪ್ರದವಾದ ಪದ್ಯಗಳನ್ನು ಹಾಡುತ್ತಾ, ಆನಂದದೊಳಗೆ ಮೈಮರೆತಿರುವದನ್ನು ಕಂಡು, ಅಕಬರನಿಗೆ ಭಕ್ತಿ ಉತ್ಪನ್ನವಾಗಿ ತನ್ನ ಮೊದಲಿನ ದುರಾಲೋಚನೆಗೆ ಮರುಕ ಹೊಂದಿ, ತನ್ನ ಕೊರಳಲ್ಲಿದ್ದ ನವರತ್ನ ಹಾರವನ್ನು ಕೈಯ್ಯಲ್ಲಿ ತೆಗೆದುಕೊಂಡು, ಎಲೌ ಮಹಿಮಳೇ! ನಿನ್ನ ಭಕ್ತಿ ಭಾವಗಳಿಗೆ ಮೆಚ್ಚಿದೆ, ಈ ನವರತ್ನ ಮಾಲಿಕೆಯನ್ನು ಸ್ವೀಕರಿಸಿ ಈ ಕೃಷ್ಣ ವಿಗ್ರಹಕ್ಕೆ ಅಲಂಕರಿಸಿದರೆ, ನಾನು ಧನ್ಯನಾಗುವೆನು ಎಂದು ಬಹು ವಿನಯದಿಂದ ಪ್ರಾರ್ಥಿಸಿಕೊಂಡನು.

ಆಗ ಮೀರಾಬಾಯಿಯು ಎಲೈ ಸಾಧುವೆ! ಇಂತಹ ಹಾರವು ನಿನಗೆ ದೊರೆತ ಬಗೆ ಹೇಗೆ? ಎನಲು, ಅಕ್ಬರನು:— ಯಮುನಾ ನದಿಗೆ ಸ್ನಾನಕ್ಕೆ ಹೋಗಿರಲು ಯಾರೋ ಅಲ್ಲಿ ಬಿಟ್ಟು ಹೋಗಿದ್ದುದರಿಂದ, ಇದು ನನಗೇನು ಪ್ರಯೋಜನವೆಂದು ಭಾವಿಸಿ ತೆಗೆದುಕೊಂಡು ಬಂದು ಕೊಟ್ಟಿರುವೆನು. ಎಂದುದನ್ನು ನಂಬಿ, ಸಾಧುವು ಕೊಟ್ಟಿರುವದರಿಂದ ನಿಜವಾಗಿಯೂ ಭಕ್ತಿಪೂರ್ವಕವಾಗಿ ಕೊಟ್ಟನೆಂದು ಭಾವಿಸಿ, ಮೀರಾಬಾಯಿಯು ಆ ಹಾರವನ್ನು ಶ್ರೀ ಕೃಷ್ಣಮೂರ್ತಿಯ ಕೊರಳಿಗೆ ಹಾಕಿದಳು.

ಇತ್ತ ಅಕ್ಬರನು ವೇಷಧಾರಿಯಾಗಿ ಹೋಗಿ, ಮಿರಾಬಾಯಿಯ ಕೈಗೆ ಅಮೂಲ್ಯವಾದ ರತ್ನಹಾರವನ್ನು ಬಹುಮಾನ ಪುರಸ್ಸರವಾಗಿ ಕೊಟ್ಟನೆಂಬ ವಾರ್ತೆಯು ಜನ ಜನಿತವಾಗಿ, ಕೊನೆಗೆ ಕುಂಭಸಿಂಗ ಮಹಾರಾಜನ ಕಿವಿಗೂ ಬಿದ್ದಿತು. ಈ ವಾರ್ತೆಯನ್ನು ಕೇಳಿದೊಡನೆಯೇ ಕುಂಭಸಿಂಗನು ಅಕಬರನ ಮೋಸಕೃತ್ಯಕ್ಕೂ, ತನ್ನ ಪ್ರಿಯಳು ಪರಪುರುಷನ ಅವಲೋಕನ ಮಾಡಿ ರತ್ನಹಾರವನ್ನು ತೆಗೆದು ಕೊಂಡದ್ದಕ್ಕೂ ಕುಪಿತನಾಗಿ, ಆ ರತ್ನಹಾರವನ್ನು ತರಿಸಿ ಪರೀಕ್ಷಿಸಿ ನೋಡಿದುದರಲ್ಲಿ, ಆ ಹಾರವು ತನ್ನ ರಾಜ್ಯದಲ್ಲಿದ್ದ ಒಬ್ಬ ಕೋಟ್ಯಾಧೀಶ್ವರನಲ್ಲಿದ್ದುದನ್ನು ಆತನೇ ಅಕಬರನಿಗೆ ಮಾರಿದ

ನೆಂದು ತಿಳಿದು, ಅನಂತರ ಕುಂಭಸಿಂಗನು, ತನ್ನ ಪ್ರಿಯ ಪತ್ನಿಯು ವ್ಲೇಂಛನ ದರ್ಶನದಿಂದ ನನ್ನ ಪ್ರೀತಿಗೆ ಬಾಹಿರಳಾಗಿ, ಮೇವಾರ ವಂಶಕ್ಕೆ ಕೆಟ್ಟ ಹೆಸರನ್ನು ತಂದಳಲ್ಲಾ! ಇನ್ನು ಇವಳ ಸಂಪರ್ಕ ತನಗೆ ಯೋಗ್ಯ ವಲ್ಲವೆಂದು, ಪತ್ನಿಯು ಪ್ರಾಣತ್ಯಾಗ ಮಾಡಿಕೊಳ್ಳುವಂತೆ ಪತ್ರಬರೆದು ರಾಜಕಿಂಕರನ ಕೈಯಲ್ಲಿ ಕೊಟ್ಟು ಕಳುಹಿಸಿದನು.

ಇತ್ತ ಮಿರಾಬಾಯಿಯು ಎಂದಿನಂತೆ ದೇವಾರಾಧನೆಯನ್ನು ಮುಗಿಸಿ ಕೊಂಡು, ದೇವಾಲಯದ ಹೊರಬಾಗಿಲಲ್ಲಿ ನಿಂತಿರುವಾಗ್ಗೆ, ಒಬ್ಬ ರಾಜ ಕಿಂಕರನು ತಂದಿದ್ದ ಪತ್ರವನ್ನು, ಆ ಪವಿತ್ರ ಹೃದಯದ ಭಕ್ತಿ ಶಿರೋಮಣಿಯ ಕೋಮಲ ಕರಕ್ಕೆ ಅರ್ಪಿಸಿ ಅಚಲಿತನಾಗಿ ನಿಂತನು. ಮಿರಾಬಾಯಿಯು ತನ್ನ ವಲ್ಲಭನ ಕಾಗದವನ್ನು ಓದಿಕೊಂಡ ಕೂಡಲೇ, ಹಾ! ಯೆಂದು ಕಳೆಗುಂದಿ, ತನ್ನ ಪ್ರಾಣತ್ಯಾಗಕ್ಕೆ ಲೇಶವೂ ಯೋಚಿಸದೆ, ಪತಿಯಾಜ್ಞೆಯನ್ನು ನೆರ ವೇರಿಸಲಿಬೇಕೆಂದು ನಿರ್ಧರಿಸಿಕೊಂಡಳು. ಚಾರನನ್ನು ನೋಡಿ, ಸೇವಕನೇ! ನನ್ನ ಪ್ರಾಣಪ್ರಿಯನ ಮುಖದರ್ಶನವು ಒಂದು ಬಾರಿಗಾದರೂ ಲಭಿಸೀತೆ? ಯೆಂದು ಆರ್ತ ಧ್ವನಿಯಿಂದ ಕೇಳಿಕೊಂಡಳು. ಚಾರ:– ತಾಯೀ, ನಮ್ಮ ಪ್ರಭುಗಳು ತಮಗೆ ಪುನರಾವಲೋಕನಕ್ಕೆ ಸಮಯವು ಸಂಧಿಸಲಾರದೆಂದು ತಿಳಿಸಿದರೆಂದನು. ಇದನ್ನು ಕೇಳಿ ರಾಣಿಯು ನಿಮ್ಮ ಪತ್ನಿಯು ಅತ್ಯಾದರದಿಂದ ರಾಜಾಜ್ಞೆಯನ್ನು ಶಿರಸಾವಹಿಸುವಳೆಂದು ಹೇಳು, ಯೆಂಬುದಾಗಿ ಹೇಳಿ ಕಳುಹಿಸಿದಳು.

ಇತ್ತ ಮಿರಾಬಾಯಿಯು ಬಹು ವ್ಯಾಕುಲದಿಂದ ಅರಮನೆಗೆ ಬಂದು ಶಯ್ಯಾಗೃಹದಲ್ಲಿದ್ದ ಪತಿಯ ಭಾವಚಿತ್ರದೆದುರಿಗೆ ನಿಂತು, ಸ್ವಾಮಿಯೇ! ನಾನಂತು ನಿಷ್ಕಲ್ಮಷ ಹೃದಯಳು. ನಿನ್ನ ಮನೋಗತದಂತೆಯೇ ನಡೆಯು ವೆನು. ಇದೋ ಈ ಆಭರಣಗಳನ್ನು ನಿನ್ನ ಪಾದಕೊಪ್ಪಿಸುವೆನು ಎಂದು ಬಿಚ್ಚಿಟ್ಟಳು, ಮತ್ತೊಂದು ಜನ್ಮದಲ್ಲಾದರೂ ನಿನ್ನ ಸೇವೆಯನ್ನು ಪೂರ್ಣ ಮಾಡುವಂತೆ ಭಗವಂತನು ನನಗೆ ದಯಪಾಲಿಸಲೆಂದು ಬೇಡಿಕೊಂಡಳು. ಒಂದು ಸಾದಾ ಸೀರೆಯನ್ನುಟ್ಟುಕೊಂಡು, ಹೊರಗೆ ಕಗ್ಗತ್ತಲೆಯಾಗಿರುವಾಗ್ಗೆ ಯಾರಿಗೂ ತಿಳಿಸದೆ ಅರಮನೆಯನ್ನು ಬಿಟ್ಟು ಹೊರಟುಹೋದಳು.

ಹೀಗೆ ಹೋಗುತ್ತ ಅತಿ ಪ್ರಯಾಸದಿಂದ ಹಸಿವು ತೃಷೆಗಳನ್ನು ತೊರೆದು, ಶ್ರೀಕೃಷ್ಣನನ್ನು ನೆನೆಯುತ್ತ ಹೋಗಿ ಯಮುನಾ ನದಿಯಲ್ಲಿ ಧುಮುಕಿದಳು. ನೀರಿನಲ್ಲಿ ಮುಳುಗಿದರೂ ಆ ದೇಹ ಮಾತ್ರ ನೀರಿನ ಮೇಲೆ ತೇಲುತಿತ್ತು. ಪುಣ್ಯ ಶರೀರವನ್ನು ಗಂಗೆಯು ಏಕೆ ಮುಳುಗಿಸಿಯಾಳು? ಅಷ್ಟರಲ್ಲಿ ಒಂದು ದಿವ್ಯತೇಜಸ್ಸು ಆಕೆಗೆ ಕಾಣಿಸಿಕೊಂಡು. "ಎಲೌ ಮಿರಾಬಾಯಿ ನೀನು ನಿನ್ನ ಪತಿಯಾಜ್ಞೆಯನ್ನು ನೆರವೇರಿಸಿದೆ, ಸಾಕಿನ್ನು ಏಳು ಮನೆಗೆ ಹೋಗುವಾ" ಯೆಂದು ಹೇಳಿದಂತಾಯಿತು. ಸ್ವಲ್ಪ ಹೊತ್ತಿನ ಮೇಲೆ ಮಿರಾಬಾಯಿಗೆ ಎಚ್ಚರವಾಗಲು ತಾನೆಲ್ಲಿರುವೆನೆಂದು ನೋಡುವಲ್ಲಿ **ಗೋಕುಲದ ಬೃಂದಾವನ ಶ್ರೀಕೃಷ್ಣನ** ಸೇವೆಯಲ್ಲಿ ನಿರತಳಾಗಿದ್ದಳು. ಈ ಸುದ್ದಿಯೂ ಈಕೆಯ ಭಕ್ತಿಯೂ ಸುತ್ತಲಿನ ಜನರು ಕೇಳಿ ಆಶ್ಚರ್ಯಪಡುತ್ತಾ ನೋಡಿಕೊಂಡು ಹೋಗುತ್ತಿದ್ದರು. ಜನರು ತಾವಾಗಿಯೇ ತಂದು ಕೊಡುತ್ತಿದ್ದ ಹಾಲು ಹಣ್ಣುಗಳನ್ನು ಕೃಷ್ಣನಿಗೆ ನಿವೇದನ ಮಾಡಿದ ನಂತರ ಸೇವಿಸಿ ಕಾಲವನ್ನು ಕಳೆಯುತ್ತಿದ್ದಳು.

ಇತ್ತ ರಾಜ್ಯದಲ್ಲಿ ಮಹಾರಾಣಿಯು ರಾಣಿವಾಸವನ್ನು ಬಿಟ್ಟು ಎಲ್ಲಿಯೋ ಹೋದಳೆಂಬ ವರ್ತಮಾನವು ಎಲ್ಲೆಲ್ಲಿಯೂ ಹರಡಿಕೊಂಡಿತು. ಕೊನೆಗೆ ಮೀರಾಬಾಯಿಯು ಗೋಕುಲ ವೃಂದಾವನದೊಳಗಿರುವಳೆಂದೂ, ಆಕೆಯು ಮನೆಯ ಬಿಟ್ಟು ಹೋದಂದಿನಿಂದ ನಡೆದ ಎಲ್ಲ ವೃತ್ತಾಂತಗಳನ್ನು ಕೇಳಿ, ಆಕೆಯ ದಿವ್ಯಗುಣಗಳನ್ನೂ ಸ್ವಾಮಿಭಕ್ತಿಯನ್ನೂ ನೆನೆದು ಆಕೆಯು ನಿರ್ದೋಷಿಯೆಂದು ಎಲ್ಲರೂ ರಾಜನನ್ನು ದೂಷಿಸಿದರು.

ರಾಜನು ತನಗುಂಟಾದ ದೂಷಣೆಯನ್ನೂ ಪ್ರಿಯ ಪತ್ನಿಯ ಅಗಲುವಿಕೆಯನ್ನೂ ಸಹಿಸಲಸದಳವಾಯಿತು. ಈಗ ತನ್ನ ಪ್ರಿಯಳು ಹೇಗಿರುವಳೆಂಬುದನ್ನು ತಿಳಿಯಲು ತಾನು ಸನ್ಯಾಸಿಯ ವೇಷವನ್ನು ಹಾಕಿಕೊಂಡು ಬೃಂದಾವನಕ್ಕೆ ಹೋಗಿ, ಆಕೆಯ ರೀತಿ ನೀತಿಯನ್ನೂ, ಕೃಷ್ಣನ ಸೇವೆಯಲ್ಲಿ ನಿರತಳಾಗಿರುವದನ್ನೂ ನೋಡಿ ಬೆರಗಾಗಿ ಮನನೊಂದು, ಎಲೌ ಮುನಿತಳೆ! ಭಿಕ್ಷುಕನಿಗೆ ಭಿಕ್ಷೆಯನ್ನು ಹಾಕುವೆಯಾ? ಎಂದು ಪ್ರಶ್ನೆ ಮಾಡಿದನು. ಆಗ ರಾಣಿಯು ಸಾಧುವೇ? ನಾನು ಮಹಾ ದರಿದ್ರಳು. ಭಿಕ್ಷವನ್ನು ನೀಡುವ

ಪುಣ್ಯವು ನನಗೆಲ್ಲಿರುವುದು ? ಎನಲು ಸಾಧುವು— ಆರ್ತರು ಬೇಡಿದುದನ್ನು ಕೊಡುವುದೇ ನಿನ್ನ ಧರ್ಮವು, ಎಂದು ಹೇಳಿ ಆಕೆಯ ಕೈಗಳನ್ನು ಹಿಡಿದು ಕೊಂಡು ತನ್ನ ನಿಜರೂಪವನ್ನು ತೋರಿಸಿ, ಪ್ರಿಯೇ ! ನನ್ನ ಅಪರಾಧವನ್ನು ಕ್ಷಮಿಸುಯೆಂದನು. ಮೀರಾಬಾಯಿಯು, ಯಾರೋ ಪರಪುರುಷನಿವನೆಂದು ಹೆದರಿ ಕತ್ತೆತ್ತಿ ನೋಡಲು, ತನ್ನ ಪ್ರಾಣವಲ್ಲಭನಾಗಲು, ನಾಚಿ ಅಂಜಲಿ ಬದ್ಧಳಾಗಿ ನಮಸ್ಕರಿಸಿ, ಪತಿ ಪಾದವನ್ನು ಹಿಡಿದು, ಪತಿಯೇ ! ನಿನ್ನ ಪ್ರೀತಿಗೆ ಬಾಹಿರಳಾಗಿ ಪಾಪಿಷ್ಠಳಾಗಿರುವೆನು, ಎಂದು ಧಾರೆಯಾಗಿ ಕಂಬನಿ ಗಳನ್ನು ಸುರಿಸಿ ಪತಿಯ ಪಾದವ ನೆನೆಯಿಸಿದಳು.

ರಾಜನು ತುಂಬಾ ಕನಿಕರ ಪಡುತ್ತ ರಾಣಿಯನ್ನು ಹಿಡಿದೆತ್ತಿ, ಹಿಂದೆ ನಡೆದ ವಿಷಯವನ್ನು ಮರೆತು, ನನ್ನನ್ನು ಕ್ಷಮಿಸು ಎಂದು ಪ್ರಾರ್ಥಿಸಿ, ಬಹು ಮರ್ಯಾದೆಯಿಂದ ಮೀರಾದೇವಿಯನ್ನು ತನ್ನ ಅರಮನೆಗೆ ಕರೆದುಕೊಂಡು ಬಂದನು. ಈ ಸುದ್ದಿಯು ರಾಜ್ಯದ ಜನರಿಗೆ ತಿಳಿದು ಬಹು ಸಂತೋಷ ಪಟ್ಟರು.



# ಚಿತ್ತೂರ ಪದ್ಮಿನಿ

ಚಿತ್ತೂರ ರಾಜಧಾನಿಯನ್ನು ಆಳುತ್ತಿದ್ದ ಪ್ರಸಿದ್ಧ ಧೊರೆಯಾದ ರಾಣಾ ಭೀಮಸಿಂಗನಿಗೆ, ಪದ್ಮಿನಿಯೆಂಬ ಬಹು ರೂಪವತಿಯಾದ ಮತ್ತು ಪತಿವ್ರತೆಯಾದ ಧರ್ಮಪತ್ನಿಯಿದ್ದಳು. ಅಲ್ಲಾಉದ್ದೀನನು ಪದ್ಮಿನಿಯ ರೂಪವನ್ನು ಕೇಳಿ ಬೆರಗಾಗಿ, ಆಕೆಯನ್ನು ಹೇಗಾದರೂ ಮಾಡಿ ತನ್ನ ವಶಪಡಿಸಿಕೊಳ್ಳಬೇಕೆಂದು, ಬಹು ದಿವಸದಿಂದ ಹವಣಿಸಿಕೊಂಡು ಒಮ್ಮೆ ಚಿತ್ತೂರಿಗೆ ಮುತ್ತಿಗೆ ಹಾಕಿದನು. ರಣವೀರರಾದ ರಜಪೂತರು ಬಹುವಾಗಿ ಹೋರಾಡಿದರು. ಮೊಗಲರ ಸೈನ್ಯವನ್ನು ತರಿದಟ್ಟಿದರು. ಆದರೂ ಅವರು ಸೋಲದಾದರು. ಆಗ ಅಲ್ಲಾಉದ್ದೀನನು ಒಮ್ಮೆ ಪದ್ಮಿನಿಯನ್ನು ನನಗೆ ತೋರಿಸಿದರೆ, ನಾನು ನೋಡಿ ತಿರುಗಿ ಹೋಗುವೆನೆಂದು ಭೀಮಸಿಂಗನಿಗೆ ಹೇಳಿಕಳುಹಿಸಿದನು. ಅದಕ್ಕೆ ರಜಪೂತ ವೀರರು ಒಪ್ಪಲಿಲ್ಲ.

ಭೀಮಸಿಂಗನು ಈ ವಿಷಯವನ್ನು ಪದ್ಮಿನಿಗೆ ತಿಳಿಸಿದನು. ಆಕೆಯು ತನ್ನ ದೆಸೆಯಿಂದ ಯುದ್ಧವು ಮುಂದುವರಿಯಬಾರದೆಂದು ಬಗೆದು "ನಾನು ಪ್ರತ್ಯಕ್ಷವಾಗಿ ಮ್ಲೇಂಛನ ಕಣ್ಣೆದುರಿಗೆ ಎಂದೂ ನಿಲ್ಲಲಾರೆನು. ಅಷ್ಟು ಅಪೇಕ್ಷೆಯಿದ್ದರೆ ಕನ್ನಡಿಯಲ್ಲಿ ನನ್ನ ಪ್ರತಿಬಿಂಬವನ್ನು ನೋಡಬಹು ದೆಂದಳು." ಅದೇ ಮಾತನ್ನು ಭೀಮಸಿಂಗನು ಅಲ್ಲಾಉದ್ದೀನನಿಗೆ ಹೇಳಿ ಕಳುಹಿಸಿದನು. ಅಲ್ಲಾಉದ್ದೀನನು ಅದಕ್ಕೆ ಒಪ್ಪಿಕೊಂಡು ಬಂದನು. ಪದ್ಮಿನಿಯನ್ನು ಕನ್ನಡಿಯಲ್ಲಿ ತೋರಿಸುವ ವ್ಯವಸ್ಥೆಯಾಯಿತು. ಕನ್ನಡಿ ಯಲ್ಲಿ ಆಕೆಯ ಪ್ರತಿಬಿಂಬವನ್ನು ನೋಡಿದ ಅಲ್ಲಾಉದ್ದೀನನು ಮತ್ತಷ್ಟು ಭ್ರಮಿತನಾದನು. ಹೇಗಾದರೂ ಮಾಡಿ ಪದ್ಮಿನಿಯ ಗಂಡನನ್ನು ಸೆರೆ ಹಿಡಿದು, ಆಕೆಯನ್ನು ತನ್ನ ರಾಣಿಯನ್ನಾಗಿ ಮಾಡಿಕೊಂಡೇ ತೀರಬೇಕೆಂದು ದುರಾಲೋಚಿಸಿ, ಕಪಟತನದ ಪ್ರೇಮವನ್ನು ಬೀರಿ, ಮಾತಾಡುತ್ತಾ ಭೀಮಸಿಂಗನನ್ನು ಪಟ್ಟಣದ ಹೊರಗೆ ಕರದೊಯ್ದನು. ಕಪಟವನ್ನು

ಅರಿಯದ ಭೀಮಸಿಂಗನು ಅವನ ಮಾತಿಗೆ ಮರುಳಾಗಿ ಅವನನ್ನು ಹಿಂಬಾಲಿಸಿ ಕಳುಹಿಸಹೋದನು. ಆಗ ಅಲ್ಲಾಉದ್ದೀನನು ಅವನನ್ನು ಮೋಸದಿಂದ ಸೆರೆ ಹಿಡಿದುಕೊಂಡು ಹೋದನು. "ನೀನು ನನ್ನ ವಶಳಾದರೆ ನಿನ್ನ ಗಂಡನನ್ನು ಬಿಟ್ಟು ಕೊಡುವೆನೆಂದು" ಪದ್ಮಿನಿಗೆ ಹೇಳಿ ಕಳುಹಿಸಿದನು.

ಪದ್ಮಿನಿಯು ರೂಪದಲ್ಲಿ ಮಿಗಿಲಾಗಿರುವಂತೆ ಬುದ್ಧಿಯಲ್ಲಿಯೂ ಮಿಗಿಲಾಗಿದ್ದಳು. ಧೈರ್ಯಗೆಡಲಿಲ್ಲ ಅಯ್ಯೋ! ಎಂದು ಅಳಲಿಲ್ಲ. ಅದಕ್ಕೆ ಒಂದು ಹಂಚಿಕೆಯನ್ನು ಬಗೆದಳು. "ನನ್ನ ಯೋಗ್ಯತೆಗೆ ತಕ್ಕ ಮರ್ಯಾದೆಯಿಂದ ನಾನು ನನ್ನ ಸಖೀಜನರೊಂದಿಗೆ ನಿಮ್ಮನ್ನು ಕಾಣಲು ಬರುವೆನೆಂದು ಹೇಳಿಕಳುಹಿಸಿದಳು." ಅದಕ್ಕೆ ಅಲ್ಲಾಉದ್ದೀನನು ಒಪ್ಪಿದನು.

ಬಳಿಕ ಪದ್ಮಿನಿಯು ಸ್ತ್ರೀ ಉಡುಪು ಧರಿಸಿದ ಏಳನೂರು ರಜಪೂತ ವೀರರನ್ನು, ಪರದೆ ಹಾಕಿದ ಮೇಣೆಯಲ್ಲಿ ಕೂಡ್ರಿಸಿ, ನಡುವಿನ ಮೇಣೆಯಲ್ಲಿ ತನ್ನ ತಮ್ಮನನ್ನು ಕೂಡ್ರಿಸಿ, ಇದು ರಾಣಿಯ ಮೇಣೆಯೆಂದು ಹೇಳಿರಿಯೆಂದು ಕಳುಹಿಸಿ, ತಾನು ಮಾತ್ರ ಹೋಗಲೇ ಇಲ್ಲ. ಈ ಹಂಚಿಕೆಯು ಅಲ್ಲಾಉದ್ದೀನನಿಗೆ ತಿಳಿಯದೆ, ಪದ್ಮಿನಿಯು ತನ್ನ ಭೆಟ್ಟಿಗೆ ಬಂದಳೆಂದು ಉಬ್ಬಿ, ಅತಿ ಉಲ್ಹಾಸದಿಂದ ಮೇಣೆಯ ಬಳಿಗೆ ಬಂದನು.

ಆಗ ಪರದೆಯೊಳಗಿದ್ದ ಪದ್ಮಿನಿಯ ತಮ್ಮನು, ಪದ್ಮಿನಿಯು ಹೇಳಿಕಳುಹಿಸಿದಂತೆ, 'ಮಹಾರಾಜ! ನಾನು ಮೊದಲು ನನ್ನ ಪತಿಯನ್ನು ಭೆಟ್ಟಿಯಾಗುವೆನು. ಇದೇ ನನ್ನ ಅವರ ಕೊನೆಯ ಭೆಟ್ಟಿಯು. ಆ ಮೇಲೆ ನಿಮ್ಮ ಭೆಟ್ಟಿಯಾಗುವೆನು. ಇದೊಂದು ಮಾತನ್ನು ನಡೆಯಿಸಿಕೊಡಿರಿ' ಎನ್ನಲು, ಹೇಗಾದರೂ ಪದ್ಮಿನಿಯು ತನ್ನವಳಾಗುವಳೆಂಬ ಹೆಮ್ಮೆಯಿಂದ ಉಬ್ಬಿ, ಅಲ್ಲಾಉದ್ದೀನನು ಆ ಮೇಣೆಯನ್ನು ಭೀಮಸಿಂಗನಿದ್ದ ಸೆರೆಮನೆಗೆ ಕಳುಹಿಸಿಕೊಟ್ಟನು. ಅತ್ತ ಆ ಮೇಣೆಯಲ್ಲಿದ್ದ ವೀರರು ಭೀಮಸಿಂಗನನ್ನು ಸೆರೆಯಿಂದ ಪಾರು ಮಾಡಿದರು. ಇತ್ತ ಏಳನೂರು ವೀರರು ಸ್ತ್ರೀ ಉಡುಪನ್ನು ಕಿತ್ತೊಗೆದು, ನಿಃಶಸ್ತ್ರರಾಗಿ ಕುಳಿತ ಅಲ್ಲಾಉದ್ದೀನನ ಸೈನಿಕರ ಮೇಲೆ ಒಮ್ಮೆಗೆ "ಜಯರಣವೀರ ಭೀಮಸಿಂಗ" ಯೆಂದು ಹಿರಿದ ಕತ್ತಿಯಿಂದ ಝುಗ್ಗನೆ ಎದ್ದು ಧುಮುಕಿದರು.

ಅಲ್ಲಾಉದ್ದೀನನು ಕಂಗೆಟ್ಟು ಘಾಬರಿಯಾಗಿ ಓಡಿದನು. ಅವನ ಸೈನಿಕರು ಮಡಿದರು. ಇತ್ತ ಭೀಮಸಿಂಗನೂ ಏಳನೂರು ರಜಪೂತ ವೀರರೂ ಸುರಕ್ಷಿತವಾಗಿ ಚಿತ್ತೂರನ್ನು ಸೇರಿದರು. ಪದ್ಮಿನಿಯು ಈ ಹಂಚಿಕೆಯಿಂದ ತನ್ನ ಗಂಡನನ್ನು ಪಾರುಮಾಡಿಕೊಂಡು ಬಾದಷಹನನ್ನು ಸೋಲಿಸಿದಳು. ಇದರಿಂದ ಬಾದಶಹನು ತನಗಾದ ಅಪಜಯದ ಮತ್ತು ಅಪಮಾನದ ಹಗೆಯೂ, ಪದ್ಮಿನಿಯ ಮೇಲಿನ ಮೋಹವೂ ಅಲ್ಲಾವುದ್ದೀನನನ್ನು ಸುಮ್ಮನಿರಗೊಡಲಿಲ್ಲ. ಕೆಲವು ಕಾಲದ ಮೇಲೆ ಅಲ್ಲಾಉದ್ದೀನನು ಬಹು ಸೈನ್ಯಸಹಿತನಾಗಿ ಬಂದು ಚಿತ್ತೂರನ್ನು ಮತ್ತೆ ಮುತ್ತಿಗೆ ಹಾಕಿದನು ಈಸಲ ಜಯಲಕ್ಷ್ಮಿಯು ಬಾದಷಹನನ್ನು ಸೇರಿದಳು. ರಜಪೂತ ವೀರರು ತಮ್ಮ ಪ್ರಾಣಗಳ ಮೇಲಿನ ಆಶೆಯನ್ನು ತೊರೆದು ಕಾದಿ ವೀರಸ್ವರ್ಗವನ್ನೈದಿದರು.

ಈ ಸುದ್ದಿಯು ಪದ್ಮಿನಿಗೂ ಪುರಸ್ತ್ರೀಯರಿಗೂ ಹತ್ತಿದ ಕೂಡಲೆ, ಅವರು ತಮ್ಮ ಪಾತಿವ್ರತ್ಯವನ್ನು ರಕ್ಷಿಸಿಕೊಳ್ಳುವದಕ್ಕಾಗಿ, ಜೋಹಾರ ವ್ರತವನ್ನು (ಅಗ್ನಿಪ್ರವೇಶ) ಸ್ವೀಕರಿಸುವರೆಂಬ ವರ್ತಮಾನವು ಊರಲ್ಲೆಲ್ಲಾ ಹಬ್ಬಿತು. ಆ ದಿನ ರಾತ್ರಿ ಚಿತ್ತೂರಿನಲ್ಲಿ ಯಾರೂ ಕಣ್ಣು ಮುಚ್ಚಿ ಮಲಗಲಿಲ್ಲ. ಅವರಿಗೆ ಮಲಗಲು ಅವಕಾಶವಿಲ್ಲ. ಬೆಳಗಾಗುತ್ತಲೆ ಅವರು ತಮ್ಮ ಇಹಲೋಕದ ಎಲ್ಲ ಲೆಕ್ಕ ಪತ್ರಗಳನ್ನು ದೇವರಿಗೆ ಒಪ್ಪಿಸಲು, ಹೋಗಬೇಕಾಗಿರುವದು. ಆದುದರಿಂದ ಅವರೆಲ್ಲರೂ ತಮ್ಮ ಆಯುಷ್ಯದ ಹಿಂದಿನ ಸಂಗತಿಗಳನ್ನೆಲ್ಲಾ ಸ್ಮರಿಸಿಕೊಳ್ಳುತ್ತಿದ್ದರು.

ಕೊನೆಗೆ ಪದ್ಮಿನಿಯು ಒಂದು ವಿಶಾಲವಾದ ಸರೋವರದ ಬಳಿಗೆ ಬಂದಳು. ಆಗ ಅವಳಿಗೆ ತನ್ನ ಹಿಂದಿನ ಸುಖದ ದಿನಗಳು ಸ್ಮರಣೆಗೆ ಬಂದವು. ತಟ್ಟನೆ ಕಣ್ಣೀರು ಉದುರಿದವು. ಅದನ್ನು ಸಾವರಿಸಿಕೊಂಡು ಪದ್ಮಿನಿಯು ತನ್ನ ಅಂತಃಪುರವನ್ನು ಪ್ರವೇಶಿಸಿದಳು. ಬಾಗಿಲಿನ ಎದುರಿಗೆ ದೊಡ್ಡದೊಂದು ಆಕೆಯ ಭಾವು ಚಿತ್ರವು ನಗುಮೊಗದಿಂದ ಒಪ್ಪುತಿತ್ತು. ಪದ್ಮಿನಿಯು ಆ ತನ್ನ ಭಾವ ಚಿತ್ರವನ್ನು ಹಿಡಿದೆಳದಳು. ಅದು ದೊಪ್ಪನೆ ಕೆಳಗೆಬಿದ್ದು ಒಡೆದು ಚೂರು ಚೂರಾಯಿತು. ಆಗ ಪದ್ಮಿನಿಯು ಉಳಿದ ತನ್ನ ಭಾವ ಚಿತ್ರದ ಹಾಳೆಯನ್ನು ದೀಪಕ್ಕೆ ಹಿಡಿದು ಸುಡ

ತೊಡಗಿದಳು. ಚಿತ್ರವು ಸುಡುತಿದ್ದಾಗ ಪದ್ಮಿನಿಯು ಅಲ್ಲಾ ಉದ್ದೀನನನ್ನು ಕುರಿತು, ಮೂರ್ಖಾ! ನೀನು ಪದ್ಮಿನಿಯ ಒಂದು ಕೂದಲನ್ನಾದರೂ ನೋಡಲಾರೆ, ಇಷ್ಟೇ ಅಲ್ಲ, ಅವಳ ಕುರುಹುಗಳು ಕೂಡ ನಿನ್ನ ಕಣ್ಣಿಗೆ ಬೀಳಲಾರವು, ಎಂದಳು.

ಇಷ್ಟರಲ್ಲಿ ಮಂದಿರದ ಹೊರಗಡೆ ಸುವರ್ಣ ಪಂಜರಗಳಲ್ಲಿದ್ದ ಗಿಳಿಯೂ ಮಾಯನಾ ಪಕ್ಷಿಯೂ "ರಾಣಿಯವರೇ ಬನ್ನಿರಿ, ಬನ್ನಿರಿ, ಕುಳಿತುಕೊಳ್ಳಿರಿ" ಎಂದವು. ಕೂಡಲೇ, ಪದ್ಮಿನಿಯು ಅವುಗಳ ಬಳಿಗೆ ಹೋಗಿ ಪಂಜರದ ಬಾಗಿಲನ್ನು ತೆರದು ಅವುಗಳನ್ನು ಹೊರಗೆ ಬಿಟ್ಟಳು. ಆದರೆ ಅವು ಹಾರಿ ಹೋಗಲಿಲ್ಲ. ತಿರುತಿರುಗಿ ಬಂದು ಪದ್ಮಿನಿಯ ಭುಜದ ಮೇಲೂ, ಮುಂಗೈ ಮೇಲೂ ಕುಳಿತುಕೊಳ್ಳುತ್ತಿದ್ದವು. ಅದನ್ನು ನೋಡಿ ಪದ್ಮಿನಿಯ ಕಣ್ಣು ಗಳಿಂದ ನೀರು ಹರಿದವು

ಆ ಮೇಲೆ ರಾಣಾಭೀಮಸಿಂಗನು ಜೋಹಾರದ ಎಲ್ಲ ಸಿದ್ಧತೆಯನ್ನು ಮಾಡಿಸಿಟ್ಟು ಅರಮನೆಗೆ ಬಂದನು. ಪದ್ಮಿನಿಯು ಹಾಸಿಗೆಯಿಲ್ಲದ ಮಂಚದ ಮೇಲೆ ಕುಳಿತು ಕೊಂಡಿದ್ದಳು. ಪತಿಯು ಬಂದುದನ್ನು ಕಂಡು ಎದ್ದು ಸಾಷ್ಟಾಂಗ ನಮಸ್ಕಾರ ಮಾಡಿದಳು. ಮನಸ್ಸಿನಲ್ಲಿ ಇದೇ ಕೊನೆಯ ದಿನ ವೆಂದಳು. ರಾಣನು ಅವಳನ್ನು ಕಣ್ಣೀರಿನಿಂದ ತಬ್ಬಿದನು. ಇಬ್ಬರ ಬಾಯಿಂದಲೂ ಮಾತು ಹೊರಡಲಿಲ್ಲ. ಆ ರಾತ್ರಿಯು ದುಃಖಮಯವಾಗಿ ಹೇಗೋ ಕಳೆಯಿತು.

ಮುಂದೆ ಪ್ರಾತಃಕಾಲದ ಸೂರ್ಯದೇವನು ಮೂಡಿಬಂದನು. ಅತ್ತ ಭೀಮಸಿಂಗನೂ ಅವನ ಅನುಯಾಯಿಗಳು ರಣಭೂಮಿಗೆ ತೆರಳಿದರು. ಇತ್ತ ರಾಣಿ ಪದ್ಮಿನಿಯೂ ಯಾವತ್ತು ವೀರ ಸ್ತ್ರೀಯರೂ ರಕ್ತಾಂಬರಗಳನ್ನುಟ್ಟು, ಅರಿಷಿಣ, ಕುಂಕುಮ, ಹೂವುಗಳನ್ನು ಮುಡಿದು **ಚಿತ್ತೂರೇಶ್ವರಿಯ** ದೇವಾಲಯಕ್ಕೆ ಹೋಗಿ, ದೇವಿಯ ದರ್ಶನಮಂ ಮಾಡಿಕೊಂಡು ತಮ್ಮ ನಿರ್ದಿಷ್ಟ ಸ್ಥಳಕ್ಕೆ ಬಂದರು. ಮಂಗಲವಾದ್ಯಗಳು ಭೋರ್ಗರೆಯುತ್ತಿದ್ದವು. ಎದುರಿಗೆ ವಿಸ್ತಾರವಾದ ಕುಂಡದಲ್ಲಿ ಅಗ್ನಿಯು ಧಗಧಗ ಉರಿಯುತ್ತಿತ್ತು. ಪದ್ಮಿನಿಯೂ ಯಾವತ್ತೂ ಸ್ತ್ರೀಯರೂ **ಅಗ್ನಿನಾರಾಯಣನನ್ನು** ಪೂಜಿಸಿ ಪ್ರದಕ್ಷಿಣೆ

ಯನ್ನು ಮಾಡಿ, ಅಗ್ನಿನಾರಾಯಣನನ್ನು ಸ್ಮರಿಸುತ್ತಾ "ಜಯ ಮಹಾಕಾಲಿ" ಯೆಂದು ಪದ್ಮಿನಿದೇವಿಯು ಮೊದಲು ಅಗ್ನಿಯಲ್ಲಿ ಧುಮುಕಿದಳು. ಆ ಮೇಲೆ ಉಳಿದ ರಜಪೂತ ವೀರಸ್ತ್ರೀಯರು ಧುಮುಕಿದರು.

ಹಿಂದೂ ಸ್ತ್ರೀಯರು ತಮ್ಮ ಪ್ರಾಣವನ್ನಾದರೂ ಪ್ರಸಂಗದಲ್ಲಿ ಧಾರೆ ಎರೆಯುತ್ತಿದ್ದರು. ಆದರೆ ಪರಪುರುಷರನ್ನು ಸೋಂಕುತ್ತಿರಲಿಲ್ಲ. ಇದಲ್ಲವೇ ನಿಜವಾದ ಪಾತಿವ್ರತ್ಯವು ?

---

# ಜೋಧಪುರದ ರಾಣಿ

ಮಾರ್ವಾಡ ದೇಶದಲ್ಲಿರುವ ಜೋಧಪುರ ಸಂಸ್ಥಾನವನ್ನು ಯಶವಂತ ಸಿಂಹನು ಆಳುತ್ತಿದ್ದನು ಈತನ ಪತ್ನಿಯೇ ಚರಿತ್ರನಾಯಕಿಯು. ಈಕೆಯ ಹೆಸರು ಎಲ್ಲಿಯೂ ಸಿಕ್ಕಿಲ್ಲ. ಆದ್ದರಿಂದ ಈಕೆಯನ್ನು ಜೋಧಪುರದ ರಾಣಿ ಯೆಂದೇ ಕರೆಯುವೆವು.

ಔರಂಗಜೇಬನು ವ್ಯಾಧಿಗ್ರಸ್ತನಾಗಿ ದಿಲ್ಲಿಗೆ ಬರುತ್ತಿರಲು, ದಾರಿಯಲ್ಲಿ ಉಜ್ಜಯನಿಯ ಸಮೀಪದಲ್ಲಿ ಯಶವಂತಸಿಂಹನು ಇವನನ್ನು ಅಡ್ಡಗಟ್ಟಿದನು. ಎರಡೂ ಕಡೆಯವರೂ ಬಹು ಘೋರವಾಗಿ ಯುದ್ಧ ಮಾಡಿದರು. ಯುದ್ಧ ದಲ್ಲಿ ತನ್ನ ಸೈನಿಕರೆಲ್ಲರೂ ಮಡಿದುದರಿಂದ, ಯಶವಂತಸಿಂಹನು ತನಗೆ ಜಯವು ಉಂಟಾಗಲಾರದೆಂದು ತಿಳಿದು ನಗರಕ್ಕೆ ಹಿಂದಿರುಗಿ ಬರುತ್ತಲಿದ್ದನು. ಆಗ ಆವನಿಗೆ ಒಂದು ವಿಧವಾದ ಭಯವು ಉಂಟಾಯಿತು. ಏನಂದರೆ:– ಯುದ್ಧದಲ್ಲಿ ಪರಾಜಯವನ್ನು ಹೊಂದಿ ಪಲಾಯಿತನಾಗಿ ಬಂದನೆಂದು ತಿಳಿದು, ನನ್ನ ರಾಣಿಯು ನನಗೇನನ್ನುವಳೋ ? ಎಂದು. ನಿಜಪತ್ನಿಯ ಕ್ಷಾತ್ರತೇಜವನ್ನು ಅರಿತವನಾದ ಕಾರಣ ಶಂಕಾನ್ವಿತನಾದನು. ಆತನ ಶಂಕೆಗೆ ಸರಿಯಾಗಿ ರಾಣಿಯು ಗಂಡನು ಯುದ್ಧದಲ್ಲಿ ಪರಾಜಯ ಹೊಂದಿ ಬಂದುದನ್ನು ಕೇಳಿ, ನಗರ ದ್ವಾರಗಳನ್ನು ಮುಚ್ಚಿಸಿ ಆತನು ಒಳಕ್ಕೆ ಬರದಂತೆ ಮಾಡಿದಳು. ಅನಂತರ ರಾಣಿಯು ಪತಿಗೆ ಈ ರೀತಿ ಹೇಳಿ ಕಳುಹಿಸಿದಳು.

**“ ಜೋಧಪುರಾಧೀಶನು ಅಪಜಯವನ್ನು ಹೊಂದಿ ತನ್ನ ದೀನಮುಖವನ್ನು ಪುರವಾಸಿಗಳಿಗೆ ತೋರದಿರುವದು ಉತ್ತಮ. ಇಂತಹ ಧೈರ್ಯಹೀನನಿಗೆ ನಾನು ಪತ್ನಿಯಾದೆನು ಎಂದು ನನಗೆ ಬಹು ನಾಚಿಕೆಯಾಗುತ್ತದೆ. ಜೋಧಪುರಾಧಿಪತಿಯಾಗಿ**

ಮೇವಾಡಾಧೀಶನಿಗೆ ಅಳಿಯನಾಗಿ ಯುದ್ಧದಲ್ಲಿ ಪರಾಜಯವನ್ನು ಹೊಂದಿ, ಓಡಿಬರುವದಕ್ಕಿಂತ ಹೀನತ್ವವು ಮತ್ತಾವುದುಂಟು? ಎಂದು ಹೇಳಿಕಳುಹಿಸಿ, ಸೇವಕರೊಡನೆ 'ಚಿತೆಯನ್ನು ಸಿದ್ಧಮಾಡಿರಿ. ಜೋಧಪುರೇಶನು ಯುದ್ಧದಲ್ಲಿ ಮಡಿದು ವೀರಸ್ವರ್ಗವನ್ನೈದಿರ ಬಹುದು. ಆದುದರಿಂದ ನಾನು ನನ್ನ ಪತಿಯನ್ನು ಸೇರಲು ಹೋಗುವೆನು" ಎಂದಳು.

ಒಂದು ವಾರದ ವರೆಗೂ ಯಶವಂತಸಿಂಹನು ನಗರದ ಹೊರಗೆ ಇದ್ದನು. ಈ ಸುದ್ದಿಯನ್ನು ಕೇಳಿದ ಯಶವಂತಸಿಂಹನ ಅತ್ತೆಯು ಜೋಧ ಪುರಕ್ಕೆ ಬಂದು ಮಗಳಿಗೆ ಬುದ್ಧಿಯ ಹೇಳಿ, ಈಗ ರಾಜನು ಅಪಜಯ ಹೊಂದಿದರೂ, ಪುನಃ ಸೈನ್ಯವನ್ನು ಸೇರಿಸಿಕೊಂಡು ಮುಂದೆ ಯುದ್ಧ ಮಾಡುವನು ಎಂದು ತಿಳಿಸಿ ಸಮಾಧಾನ ಪಡಿಸಿದಳು. ಆಗ ರಾಣಿಯು ನಗರ ದ್ವಾರಗಳನ್ನು ತೆಗೆಸಿದಳು. ಯಶವಂತಸಿಂಹನು ಮನೆಗೆ ಬಂದ ಮೇಲೆ ಆತನ ಗಾಯಗಳನ್ನು ನೋಡಿ ನೊಂದು ಔಷಧೋಪಚಾರಗಳಿಂದ ಗಾಯಗಳನ್ನು ವಾಸಿಮಾಡಿದಳು.

ಔರಂಗಜೇಬನು ದಿಲ್ಲಿಯನ್ನು ಸೇರಿ ತಂದೆಯನ್ನು ಕಾರಾಗೃಹದಲ್ಲಿಟ್ಟು, ಸೋದರರನನ್ನು ಕೊಂದು ರಾಜ್ಯವನ್ನು ಅಪಹರಿಸಿದ ನಂತರ, ಯಶವಂತಸಿಂಹನ ಮೇಲೆ ತನ್ನ ದೃಷ್ಟಿಯನ್ನು ಪ್ರಸರಿಸಿದನು. ಅವನನ್ನು ಯಮಸದನಕ್ಕೆ ಕಳುಹಿದರೆ ತನ್ನ ರಾಜ್ಯವು ನಿಷ್ಕಂಟಕವಾಗುವದೆಂದು ಬಗೆದನು. ಅದ ಕ್ಕಾ ಉಪಾಯವನ್ನು ಹುಡುಕುತ್ತಲಿದ್ದನು. ಆ ಸಮಯದಲ್ಲಿ ಕಾಬೂಲಿ ನಲ್ಲಿ ನಡೆಯುತ್ತಲಿದ್ದ ಪ್ರಜಾಯುದ್ಧವನ್ನು ನಿಲ್ಲಿಸುವದಕ್ಕಾಗಿ, ಯಶವಂತ ಸಿಂಹನಿಗೆ ಸೈನ್ಯಾಧಿಪತ್ಯವನ್ನು ಕೊಟ್ಟು ಅಲ್ಲಿಗೆ ಕಳುಹಿಸಿದನು. ಔರಂಗ ಜೇಬನ ಕಪಟವನ್ನರಿಯದ ಯಶವಂತಸಿಂಹನು ದಂಡಯಾತ್ರೆಗೆ ಹೊರಟನು. ಆತನೊಡನೆ ಆತನ ಪತ್ನಿಯೂ ಪ್ರಯಾಣ ಮಾಡಿದಳು. ಈ ದಂಪತಿಗಳು ತಮಗೆ ಪೂರ್ವದಲ್ಲಿ ಉಂಟಾದ ಅಪಕೀರ್ತಿಯನ್ನು ಹೋಗಲಾಡಿಸಿಕೊಳ್ಳ ಬೇಕೆಂದು ಕೃತ ನಿಶ್ಚಯರಾಗಿ, ತಮ್ಮ ಪುತ್ರನಾದ ಪೃಥಿವೀಸಿಂಹನಿಗೆ ರಾಜ್ಯ ಭಾರವನ್ನು ವಹಿಸಿ ಹೊರಟರು.

ಆ ಸಮಯದಲ್ಲಿ ರಾಣಿಯು ಪುರುಷವೇಷವನ್ನು ಧರಿಸಿ, ಒಬ್ಬ ಶೂರ ವೀರನಂತೆ ಪತಿಯೊಡನೆ ಪ್ರಯಾಣ ಮಾಡುತ್ತಲಿದ್ದಳು. ಬಹು ಕಷ್ಟದೊಡನೆ ಪರ್ವತ ಪ್ರದೇಶಗಳನ್ನು ದಾಟಿ ಕಾಬೂಲನ್ನು ಸೇರಿದರು. ವಿಶ್ರಾಂತಿಯು ಅಣುಮಾತ್ರವಿರಲಿಲ್ಲ. ಅಂಥಾದ್ದರಲ್ಲಿ ಯುದ್ಧ ಸುರುವಾಯಿತು. ಆ ಸಮಯದಲ್ಲಿ ರಾಣಿಯು ಗರ್ಭವತಿಯಾಗಿದ್ದರೂ ಪತಿಯನ್ನು ನೆರಳಿನಂತೆ ಹಿಂಬಾಲಿಸುತ್ತ, ಆತನಿಗೆ ಸರ್ವಕಾರ್ಯಗಳಲ್ಲಿಯೂ ಸಹಾಯಕಳಾಗಿದ್ದಳು. ಆಕೆಯ ಶೌರ್ಯ-ಧೈರ್ಯಗಳನ್ನು ಕಂಡು ರಜಪೂತರು ಬೆರಗಾಗುತ್ತಲಿದ್ದರು.

ಇತ್ತ ಔರಂಗಜೇಬನು ಈ ದಂಪತಿಗಳು ಕಾಬೂಲಿನಲ್ಲಿರುವಾಗಲೆ, ಮೋಸದಿಂದ ಯಶವಂತಸಿಂಹನನ್ನು ವಿಷಪ್ರಯೋಗದಿಂದ ಕೊಲ್ಲಿಸಿದನು. ಆತನ ಮಗನಾದ ಪೃಥ್ವಿಸಿಂಹನನ್ನು ದಿಲ್ಲಿಗೆ ಕರೆಯಿಸಿ, ಅವನನ್ನು ವಿಷಪ್ರಯೋಗದಿಂದ ಕೊಲ್ಲಿಸಿದನು. ಔರಂಗಜೇಬನು ತಾನು ಮಾಡಿದ ಕಾರ್ಯದಿಂದ ಯಶವಂತಸಿಂಹನ ವಂಶವು ಸಮೂಲವಾಗಿ ನಾಶವಾಯಿತೆಂದು ಸಂತೋಷಿಸಿದನು. ಔರಂಗಜೇಬನ ಮೋಸದಿಂದಾದ ಯಶವಂತಸಿಂಹನ ಅಕಾಲಮರಣದಿಂದ ರಾಣಿಯು ಬಹುವಾಗಿ ನೊಂದಳು. ವರ್ಣಿಸಲಾರದಷ್ಟು ಕಷ್ಟಗಳನ್ನನುಭವಿಸಿದಳು. ಮೃತನಾದ ಪತಿಯೊಡನೆ ಸಹಗಮನವನ್ನು ಮಾಡುವದು ಆ ಕಾಲದಲ್ಲಿ ಶ್ರೇಷ್ಠವಾದ ಪದ್ಧತಿಯಾಗಿತ್ತು.

ಆದರೆ ರಾಣಿಯು ಗರ್ಭಿಣಿಯಿದ್ದಳೆಂದು ಹಿಂದೆಯೇ ಹೇಳಿರುವೆವು. ಈ ಕಾರಣದಿಂದ ರಾಣಿಯು ಶಿಶುಹತ್ಯ ದೋಷಕಂಜಿ ಸಹಗಮನವನ್ನು ನಿಲ್ಲಿಸಬೇಕಾಯಿತು. ಅಸಹ್ಯವಾದ ದುಃಖಕಾಲದಲ್ಲಿ ಸೇನೆಯನ್ನು ನಡೆಸಲು ಬೇರೊಬ್ಬರಿಲ್ಲದುದರಿಂದ, ತಾನೇ ಸೇನಾಧ್ಯಕ್ಷಳಾಗಿ ಸೇನೆಯೊಡನೆ ಹಿಂದುಸ್ಥಾನದ ಮಾರ್ಗವನ್ನು ಹಿಡಿದಳು. ದಾರಿಯಲ್ಲಿಯೇ ಗಂಡುಮಗನನ್ನು ಪ್ರಸವಿಸಿದಳು. ಆ ಮಗನೇ ಅಜಿತಸಿಂಹನು ಅವನು ಯುಕ್ತವಯಸ್ಸಿನಾದ ಮೇಲೆ ತನ್ನ ತಂದೆಯನ್ನೂ, ಅಣ್ಣನನ್ನೂ ಕೊಂದ ಔರಂಗಜೇಬನ ಮೇಲಿರುವ ಹಗೆಯನ್ನು ತೀರಿಸಿಕೊಂಡನು.

ನಂತರ ರಾಣಿಯು ಶರೀರದಲ್ಲಿ ಸ್ವಲ್ಪ ಬಲ ಬಂದಮೇಲೆ ಮುಂದೆ ಪ್ರಯಾಣ ಮಾಡಿದಳು. ಇವರು ದಿಲ್ಲಿಗೆ ಸಮೀಪಿಸಿದರು. ಔರಂಗಜೇಬನು ಯಶವಂತಸಿಂಹನ ಪತ್ನಿಯೂ, ಮಗನಾದ ಅಜಿತಸಿಂಹನೂ ದಿಲ್ಲಿಯ ವರೆಗೂ ಬಂದರೆಂಬ ಸುದ್ದಿಯನ್ನು ಕೇಳಿ, ಕ್ರೋಧಾಂಧನಾಗಿ ರಾಣಿಗೆ "ನಿನ್ನ ಮಗನನ್ನು ಕೂಡಲೆ ನನ್ನ ಬಳಿಗೆ ಕಳುಹಿಸು" ಯೆಂದು ಹೇಳಿ ಕಳುಹಿಸಿದನು. ರಾಣಿಯು ಮಗನನ್ನು ಕಳುಹಿಸಲೊಪ್ಪದೆ, ಔರಂಗಜೇಬನೊಡನೆ ಯುದ್ಧ ಮಾಡಿ, ಮಗನನ್ನೂ ತನ್ನನ್ನೂ ರಕ್ಷಿಸಿಕೊಳ್ಳಬೇಕೆಂದು ನಿಶ್ಚಯಿಸಿ, ಮಗನನ್ನು ಒಂದು ಹಣ್ಣಿನ ಬುಟ್ಟಿಯಲ್ಲಿಟ್ಟು ಸೇವಕನ ಕೈಯ್ಯಲ್ಲಿ ಕೊಟ್ಟಳು. ಅವನು ಹಣ್ಣುಗಳನ್ನು ತೆಗೆದುಕೊಂಡು ಹೋಗುವ ನೆವದಿಂದ, ಆ ಬುಟ್ಟಿಯನ್ನು ನಿಯಮಿತ ಸ್ಥಳಕ್ಕೊಯ್ದು ಮುಟ್ಟಿಸಿದನು.

ಅನಂತರ ರಾಣಿಯೂ ಆಕೆಯ ಸೈನಿಕರೂ ಬಾದಷಹನ ಸೈನ್ಯದೊಡನೆ ಬಹು ಘೋರವಾಗಿ ಯುದ್ಧಮಾಡಿ ಅವರನ್ನು ಸೋಲಿಸಿ ಮೇವಾಡವನ್ನು ಸೇರಿದರು. ತನ್ನ ಪುತ್ರನು ಪ್ರಾಣಭಯವಿಲ್ಲದೆ ಸುರಕ್ಷಿತನಾಗಿರುವದನ್ನು ಕಂಡು ರಾಣಿಯು ಪರಮಾನಂದಭರಿತೆಯಾದಳು.

ಅಜಿತಸಿಂಹನು ದೊಡ್ಡವನಾದ ಮೇಲೆ ತನ್ನ ಶೌರ್ಯದಿಂದ ಮೊಗಲ ರನ್ನು ಅನೇಕಸಲ ಸೋಲಿಸಿದನು. ರಾಣಿಯು ತನ್ನ ಪುತ್ರನ ಸಂಗ್ರಾಮ ನೈಪುಣ್ಯವನ್ನು ನೋಡಿ ಆನಂದಪಡುತ್ತಾ "**ಹೆತ್ತ ಋಣವು ತೀರಿತು**" ಯೆಂದು ಹೇಳುತ್ತಾ, ಒಂದು ದಿನ ಪತಿಯ ನೆನಪಿನಲ್ಲೇ ವೃದ್ಧಳಾಗಿ ಕಾಲಗತಿಯನ್ನೈದಿದಳು.

---

# ಅಹಲ್ಯಾಬಾಯಿ

ಮಾಳವ ಪ್ರಾಂತದ ಇಂದೂರು ಸಂಸ್ಥಾನವನ್ನು, ಮಹಾರಾಷ್ಟ್ರ ಸರದಾರ ಮಂಡಲದ ರತ್ನವಾದ, ಮಲ್ಹಾರರಾಯ ಹೋಳ್ಕರನು ರಾಜ್ಯವಾಳುತ್ತಿದ್ದನು. ಆತನ ಪುತ್ರ ಖಂಡೇರಾಯ. ಅಹಲ್ಯಾಬಾಯಿಯೇ ಖಂಡೇರಾಯನ ಧರ್ಮಪತ್ನಿ. ವೀರನಾದ ಮಲ್ಹಾರರಾಯನು ತಾನು ಜೀವಂತನಾಗಿರುವಾಗಲೇ, ತನ್ನ ವೀರಪುತ್ರನ ಮರಣವಾರ್ತೆಯನ್ನು ಕೇಳಬೇಕಾಯಿತು. ಮಗನು ತುಂಭೇರಿನ ಮುತ್ತಿಗೆಯಲ್ಲಿ ವೀರಸ್ವರ್ಗವನ್ನೈದಿದನು. ಸುಖಸಾಮ್ರಾಜ್ಯದಲ್ಲಿ ಮುಳುಗಿದ್ದ ಅಹಲ್ಯಾಬಾಯಿಯು ವಿಧವೆಯಾದಳು. ಆಕೆಯು ಅಪಾರವಾದ ದುಃಖದಲ್ಲಿ ಮುಳುಗಿದಳು. ಹಿಂದೂ ಸ್ತ್ರೀಯರಿಗೆ ಪತಿಯೇ ಪರದೈವ. ಪತಿಯೇ ಸರ್ವಸ್ವ. ಅಂತಹ ಪತಿಯನ್ನು ಕಳೆದುಕೊಂಡ ಮೇಲೆ, ತಾನು ಬದುಕಿರಲಾರೆನೆಂದು ಅಹಲ್ಯಾಬಾಯಿಯು ಸಹಗಮನಕ್ಕೆ ಉದ್ಯುಕ್ತಳಾದಳು.

ಮಲ್ಹಾರರಾಯನು ಇದನ್ನು ಕಂಡು "ಮಗನ ಮರಣದ ಜೊತೆಗೆ ನೀನೂ ಮರಣವನ್ನೈದಬೇಡ. ನಾನು ಮುದುಕನಾದೆ. ಈ ನನ್ನ ಮೊಮ್ಮಕ್ಕಳು ಅನಾಥರಾಗುವರು. ದೊಡ್ಡಮನಸ್ಸು ಮಾಡು ತಾಯಿ" ಎಂದು ಗದ್ಗದಸ್ವರದಿಂದ ಸೊಸೆಯನ್ನು ಬೇಡಿಕೊಂಡನು. ಅಹಲ್ಯಾಬಾಯಿ ತನ್ನ ಸಂಕಲ್ಪವನ್ನು ಬಿಡಬೇಕಾಯಿತು. ಪೂಜ್ಯನಾದ ಮಾವನ ಸೇವೆಯಲ್ಲಿಯೂ, ಮಕ್ಕಳ ಲಾಲನೆ ಪಾಲನೆಗಳಲ್ಲಿಯೂ, ತನ್ನ ದುಃಖವನ್ನು ಮರೆಯುತ್ತಾ ಬಂದಳು.

ಆದರೆ ವಿಧಿ ಆಕೆಯ ವಿಚಾರದಲ್ಲಿ ನಿಷ್ಕರುಣಿಯಾಗಿದ್ದನು. ಪೂಜ್ಯನಾದ ಮಾವನು ಕೆಲವು ಕಾಲದ ಮೇಲೆ ಪರಲೋಕಗತನಾದನು. ಅಹಲ್ಯಾಬಾಯಿ ಇದರಿಂದ ಕುಗ್ಗಿಹೋದಳು. ಎಲ್ಲ ಆರಭಾರವು ಆಕೆಯ ತಲೆಯ ಮೇಲೆ ಬಿತ್ತು. ಆಗ ಮಗನು ಹತ್ತು ವರ್ಷದವನೂ, ಮಗಳು ಎಂಟು

ವರ್ಷದವಳೂ ಇದ್ದರು. ಆದರೂ ಧೈರ್ಯಗೆಡದೆ ರಾಜ್ಯಾಧಿಕಾರಿಯಾದ ಮಗನಿಗೆ ಪಟ್ಟಕಟ್ಟಿ, ಅವನು ಅಪ್ರಾಪ್ತವಯಸ್ಕನಾದುದರಿಂದ ಆಡಳಿತವನ್ನು ತಾನೇ ನೋಡಿಕೊಳ್ಳುತ್ತಿದ್ದಳು. ಇಂದಿಲ್ಲ ನಾಳೆ ತನಗೆ ಶಾಂತಿ ಸಿಗಬಹುದೆಂದು ನೆನೆಸುತ್ತಿದ್ದ ಅಹಲ್ಯಾಬಾಯಿಗೆ, ಮತ್ತೊಂದು ಚಿಂತೆಯು ಗಂಟುಬಿತ್ತು. ಒಬ್ಬನೇ ಮಗನಾದ ಮಾಲೇರಾಯನಿಗೆ ಬುದ್ಧಿ ವಿಕಲ್ಪವಾಯಿತು. ಹುಚ್ಚುಹಿಡಿದ ಮಗನ ಅವಿವೇಕವನ್ನು ನೋಡಿ ನೋಡಿ ಆಕೆ ಕಣ್ಣೀರು ಹಾಕುತ್ತಿದ್ದಳು. ಮಗನು ಹುಚ್ಚನೋ ಬೆಪ್ಪನೋ ಚಿರಜೀವಿಯಾಗಿರಲೆಂದು ಹೆತ್ತ ಹೊಟ್ಟೆ ಆಶೀರ್ವದಿಸುತ್ತಿದ್ದರೆ, ವಿಧಿ ಮರೆಯಲ್ಲಿ ನಿಂತು ಅಣಕಿಸುತ್ತಿತ್ತು. ವಿಕಲ್ಪವಾಗಿದ್ದ ಬುದ್ಧಿ ಮತ್ತಷ್ಟು ಪಲ್ಲಟವಾಗಿ ಮಗನ ಪ್ರಾಣವನ್ನೇ ತೆಗೆದುಕೊಂಡು ಹೋಯಿತು.

ಮುಂದೇನು ? ರಾಜ್ಯಭಾರವನ್ನು ಅಹಲ್ಯಾಬಾಯಿ ಸ್ವತಃ ವಹಿಸಬೇಕಾಯಿತು. ಸ್ವಾರ್ಥಪರರಾಗಿದ್ದ ಕೆಲವು ಸರದಾರರು ಅಹಲ್ಯಾಬಾಯಿಯನ್ನು ರಾಣಿಯಾಗಿ ಒಪ್ಪಿಕೊಳ್ಳಲಿಲ್ಲ. ನೀನು ದತ್ತುಪುತ್ರನನ್ನು ಮಾಡಿಕೊಳ್ಳಬೇಕೆಂದೂ, ಹೆಂಗಸು ರಾಜ್ಯಕಾರಭಾರಕ್ಕೆ ಅನರ್ಹಳೆಂದೂ, ಪತ್ರಬರೆದು ತಿಳಿಸಿದರು. ಸ್ವಾಮಿಭಕ್ತಿಯುಳ್ಳ ಪ್ರಧಾನಿ ತುಕೋಜಿಯ ಸಹಾಯದಿಂದ, ಆ ಪಿತೂರಿಗಾರರನ್ನು ಅಹಲ್ಯಾಬಾಯಿಯು ಹಿಡಿಸಿ ಸೆರೆಯಲ್ಲಿಡಿಸಿದಳು. ಇಷ್ಟರಿಂದಲೇ ರಾಜ್ಯವ್ಯವಸ್ಥಿತವಾಗಲಿಲ್ಲ. ದೇಶದಲ್ಲಿ ಠಕ್ಕರ ಮತ್ತು ಪೆಂಡಾರಿಯವರ ಹಾವಳಿ ಅಧಿಕವಾಯಿತು. ರಾಜಮಾರ್ಗಗಳಲ್ಲಿ ಜನರು ಕ್ಷೇಮವಾಗಿ ಪ್ರಯಾಣ ಮಾಡುವಂತಿರಲಿಲ್ಲ. ಆಗ ಅಹಲ್ಯಾಬಾಯಿ ಯಶವಂತರಾಯನೆಂಬ ವೀರನನ್ನು ತಕ್ಕ ಸೈನ್ಯದೊಡನೆ ಕಳುಹಿಸಿ, ಆ ದುಷ್ಟ ಜನರನ್ನು ಅಡಗಿಸುವಂತೆ ಆಜ್ಞೆಯಿತ್ತಳು. ಸುಂದರನೂ, ಧೀರನೂ, ಸಾಹಸಿಯೂ, ಯೌವ್ವನ ಪುರುಷನೂ ಆಗಿದ್ದ ಯಶವಂತರಾಯನು, ಹಗಲೆನ್ನದೆ ಇರುಳೆನ್ನದೆ ಅಲೆದು ಠಕ್ಕರ ಒಂದು ಪಿಳ್ಳೆಯಿಲ್ಲದಂತೆ ಅಡಗಿಸಿದನು.

ಅಹಲ್ಯಾಬಾಯಿ ಇದನ್ನು ಕಂಡು ಬಹಳ ಸಂತೋಷಪಟ್ಟು, ಆತನು ಮಾಡಿದ ಉಪಕಾರಕ್ಕೆ, ತನ್ನ ಮುದ್ದು ಕುವರಿಯಾದ ಮುಕ್ತಾಬಾಯಿಯನ್ನು ಕೊಟ್ಟು ವಿವಾಹವನ್ನು ಮಾಡಿದಳು. ಈ ನೂತನ ದಂಪತಿಗಳಿಂದ ಅಹಲ್ಯಾ

ಬಾಯಿಗೆ ಸ್ವಲ್ಪ ಸಮಾಧಾನವೆನಿಸಿತು. ಮಲ್ಹಾರರಾಯ ಹೋಳ್ಕರನ ವಂಶ ನಿರ್ವಂಶವಾಗದೆ ಅಂಕುರವಿಡುವುದೆಂಬ ಆಸೆ ಅಂಕುರಿಸಿತು. ಆದರೆ ಅಹಲ್ಯಾ ಬಾಯಿಯ ಜಾತಕದಲ್ಲಿ ಬರೀ ದುಃಖವನ್ನೇ ದೇವರು ಬರೆದಿರಬಹುದೇ ? ಮುಂದೆ ವರ್ಷ ತುಂಬುವದರೊಳಗಾಗಿ ಮುಕ್ತಾಬಾಯಿಗೆ ಒಂದು ಮಗು ವಾಗಿ ಅದು ಪರಂಧಾಮವನ್ನು ಸೇರಿತು. ಯಶವಂತರಾಯನು ಹಠತ್ತಾಗಿ ತೀರಿಹೋದನು. ಇದರಿಂದ ಮುಕ್ತಾಬಾಯಿಯ ದುಃಖ ಮೇರೆದಪ್ಪಿತು. ಮಗಳ ದುರವಸ್ಥೆಯನ್ನು ನೋಡಿ ಅಹಲ್ಯಾಬಾಯಿಯ ಹೃದಯ ಭೇದಿಸಿತು. ತೆರೆಯ ಮೇಲೆ ತೆರೆ ಅಪ್ಪಳಿಸುವಂತೆ ದುಃಖದಲ್ಲಿ ಮುಳುಗಿದವರಿಗೆ ದುಃಖ ಪರಂಪರೆಗಳು ಒದಗುವದು, ಆ ಜಗದೀಶ್ವರನ ಆಜ್ಞೆಯಿರಬಹುದೇ ? ಅಹಲ್ಯಾಬಾಯಿಯ ದುಃಖಪಾತ್ರೆ ತುಂಬುವವಕ್ಕೆ ಇನ್ನೊಂದು ಬೊಗಸೆ ಶೋಕಜಲ ಬೇಕಾಗಿತ್ತೆಂದು ತೋರುತ್ತದೆ. ಆ ಬೊಗಸೆಯೂ ಬಂದು ಸೇರಿತು.

ಮುಕ್ತಾಬಾಯಿ ಪ್ರಾಣಪತಿಯನ್ನಗಲಿ ಒಂದು ಕ್ಷಣವೂ ಜೀವಿ ಸುವುದಿಲ್ಲವೆಂದು ಸಹಗಮನ ಮಾಡಲುದ್ಯುಕ್ತಳಾದಳು. ಸರ್ವ ಬಂಧು ಗಳನ್ನು ಕಳೆದುಕೊಂಡು ಈ ಮಗಳೊಬ್ಬಳನ್ನು ಮಾತ್ರ ಇಟ್ಟುಕೊಂಡಿದ್ದ ಅಹಲ್ಯಾಬಾಯಿಯ ಧೈರ್ಯಕೆಟ್ಟಿತು. " ಮಗೂ ನನ್ನೊಬ್ಬಳನ್ನೇ ಬಿಟ್ಟು ಹೋಗ ಬೇಡಮ್ಮ" ಎಂದು ಅಳುತ್ತಳುತ್ತಾ ಬೇಡಿಕೊಂಡಳು. " ಅಮ್ಮಾ ನಿನಗೆ ವಯಸ್ಸಾಯಿತು. ಇಂದೋ ನಾಳೆಯೋ ಕಣ್ಣುಮುಚ್ಚಿಕೊಳ್ಳುತ್ತಿ. ನಿನ್ನೊಡನೆ ನಿನ್ನ ದುಃಖವೆಲ್ಲವೂ ದಗ್ಧವಾಗಿ ಹೋಗುವದು. ಆಗ ನನ್ನ ಗತಿಯೇನು ? ನೀನೇ ತಿಳಿದುನೋಡಮ್ಮಾ, ನಾನು ಈ ಭೂಮಿಯ ಮೇಲೆ ಇನ್ನು ಕ್ಷಣಕಾಲ ಇರಲಾರೆನಮ್ಮ, ಖಂಡಿತ ಇರಲಾರೆ. ನನಗೆ ಅಪ್ಪಣೆಯನ್ನು ಕೊಡು. ನಿನ್ನ ಕಣ್ಣಮುಂದೆಯೇ ನಾನು ಚಿತೆಯನ್ನು ಏರಿದರೆ ನಾನು ಧನ್ಯ. ಸಂತೋಷವಾಗಿ ಸುಟ್ಟು ಹೋಗುವೆನು. ಎಂದು ಮುಕ್ತಾಬಾಯಿ ಗೋಳಾಡಿದಳು. ಮುಂದೇನು. ಚಿತೆಯು ಸಿದ್ಧವಾಯಿತು ? ಮುಕ್ತಾಬಾಯಿಯು ಧೈರ್ಯದಿಂದ ಚಿತೆಯನ್ನೇರಿದಳು. ತಾಯಿಯಾದ ಅಹಲ್ಯಾಬಾಯಿ ಕರುಳನ್ನು ಹಿಂಡಿಕೊಂಡು ಮಗಳನ್ನು ನೋಡಿದಳು. ತಾಯಿ–ಮಕ್ಕಳ ನೋಟಗಳು ಸೇರಿದವು. ದುಃಖದಿಂದ ರಾಣಿಯು ನೆಲಕ್ಕೆ

ಬಿದ್ದಳು. ಸಕಲ ಸಂಪತ್ತುಗಳ ನಡುವೆ ಅಹಲ್ಯಾಬಾಯಿ ಏಕಾಕಿನಿ, ದುಃಖ ಭಾಗಿನಿ, ಮಗಳು ಬೆಂದು ಹೋದ ದೃಶ್ಯ ಅಹಲ್ಯಾಬಾಯಿಯ ದೃಷ್ಟಿಪಥದಲ್ಲಿ ನಿರಂತರವೂ ಉಳಿಯಿತು.

ಅಹಲ್ಯಾಬಾಯಿಗೊದಗಿದ ದುಃಖ ಪರಂಪರೆಗಳಲ್ಲಿ ಎಂತಹ ಧೈರ್ಯ ಶಾಲಿಯಾದರೂ ಕುಸಿದು ಬೀಳತಕ್ಕವನೇ. ಆದರೂ ಅಂಥಾದ್ದರಲ್ಲಿ ಅಬಲೆ ಯಾದ ಅಹಲ್ಯಾಬಾಯಿ ಅವುಗಳೆಲ್ಲವನ್ನು ಸಹಿಸಿಕೊಂಡು, ಪ್ರಜೆಗಳೇ ತನ್ನ ಮಕ್ಕಳೆಂದು ಭಾವಿಸಿಕೊಂಡು, ದೇವರು ತನಗೆ ವಹಿಸಿದ ರಾಜ್ಯಭಾರ ಕಾರ್ಯದಲ್ಲಿ ಚಾಚೂ ತಪ್ಪದೆ ಕೃತಾರ್ಥಳೆನಿಸಿದಳು.

ಅಹಲ್ಯಾಬಾಯಿ ಆಡಂಬರವಿಲ್ಲದ ಬಟ್ಟೆಗಳನ್ನು ಉಡುತ್ತಿದ್ದಳು. ಆಕೆಯ ದಿನಚರಿ ಎಂತಹ ದೃಢಾಂಗನಿಗೂ ಕಷ್ಟವೆನಿಸುತಿದ್ದಿತು. ಮನೋ ದಾರ್ಢ್ಯ, ಇಂದ್ರಿಯ ನಿಗ್ರಹಶಕ್ತಿ, ಶಾಂತತೆ ತುಂಬಿ ತುಳುಕುತಿದ್ದವು. ಅರುಣೋದಯಕ್ಕೆ ಮುಂಚಿತವಾಗಿಯೇ ಹಾಸಿಗೆಯಿಂದೆದ್ದು, ಸ್ನಾನಾದಿಗಳನ್ನು ಮುಗಿಸಿಕೊಂಡು, ಭಗವತ್ಪ್ರಾರ್ಥನೆ ಪೂಜೆ ಪುರಸ್ಕಾರಗಳಲ್ಲಿ ನಿರತಳಾಗು ತಿದ್ದಳು. ಆ ಮೇಲೆ ಗ್ರಂಥಗಳನ್ನು ಓದಿಸಿ ಕೇಳುತ್ತಿದ್ದಳು. ಬಡಬಗ್ಗರಿಗೆ ದಾನಧರ್ಮಗಳನ್ನು ಯಥೇಚ್ಛವಾಗಿ ಕೊಡುತ್ತಿದ್ದಳು. ಮಾಂಸಾದಿ ನಿಷಿದ್ಧ ಪದಾರ್ಥಗಳನ್ನು ಆಕೆ ಸೇವಿಸುತ್ತಿರಲಿಲ್ಲ.

ಆಕೆಯು ಆಳಿದ ೩೦ ವರ್ಷಗಳಲ್ಲಿ ರೈತರು ಪುಷ್ಟರಾದರು. ನ್ಯಾಯವೂ ಸತ್ಯವೂ ಸರ್ವತ್ರ ವ್ಯಾಪಿಸಿದ್ದವು. ಆಕೆಯ ಹೆಸರಿನಲ್ಲಿ ರಾಮೇಶ್ವರದಿಂದ ಹಿಡಿದು ಕಾಶಿಯವರೆಗೂ ಮುಖ್ಯ ಮುಖ್ಯ ಯಾತ್ರಾಸ್ಥಳಗಳಲ್ಲಿ ದೇವಾಲಯ ಗಳೂ ಸತ್ರಗಳೂ ಏರ್ಪಟ್ಟು, ಇಂದಿಗೂ ನಡೆದುಕೊಂಡು ಬಂದಿವೆ. ಆಕೆಯ ಗುಣವನ್ನು ಎಲ್ಲರೂ ಕೊಂಡಾಡುತ್ತಿರುವರು. ಧರ್ಮದಿಂದ ರಾಜ್ಯವಾಳಿದ ಆ ಧರ್ಮಪರಾಯಣೆಯ ಅವತಾರ ಸ್ತ್ರೀಯೆಂದು ಗಣಿಸಲಾಗದು. ಸ್ತ್ರೀ ಜನ್ಮತಾಳಿದ ಭಗವತಿಯ ಅವತಾರವೆಂದು ತಿಳಿದರೆ ತಪ್ಪಾಗಲಾರದು. ಆ ಸಾಧ್ವಿಮಣಿಯು ತನ್ನ ಅರವತ್ತನೆಯ ವಯಸ್ಸಿನಲ್ಲಿ ಕ್ರಿ. ಶ. ೧೭೯೫ರಲ್ಲಿ ಪರಲೋಕಗತಳಾದಳು. ಅಳಿದಳು. ಆಕೆ ಅಳಿದರೇನು, ಆಕೆಯ ಕೀರ್ತಿ ಚಿರಸ್ಥಾಯಿಯಾಗಿ ಉಳಿದೇ ಇದೆ.

---



ತಾಜಮಹಲ



ಶಾಹಾಜಾನ ಮಮತಾಜಬೇಗಂ

# ಮುಮತಾಜಬೇಗಂ

ಮುಮತಾಜ ಬೇಗಂ ಈಕೆಯು ನೂರಜಹಾನಳ ಅಣ್ಣನ ಮಗಳು. ರೂಪದಲ್ಲಿ ರತಿದೇವಿ. ಗುಣದೊಳಗೆ ಗೌರಿದೇವಿ. ಮೀರಿದ ಮಹಾಪತಿವ್ರತೆ. ಜಹಂಗೀರನ ಮಗನಾದ ಶಹಾಜಹಾನನೊಡನೆ ಈಕೆಯ ಲಗ್ನವಾಗಿತ್ತು. ಆಕೆಯು ತನ್ನ ಗಂಡನನ್ನು ಬಹಳವಾಗಿ ಪ್ರೀತಿಸುತ್ತಿದ್ದಳು. ಶಹಜಾನನು ಈಕೆಯ ದೆಶೆಯಿಂದ ಏಕ ಪತ್ನಿವ್ರತಸ್ಥನಾಗಿದ್ದನು. ಗಂಡನಿಗೆ ಹಲವು ಪ್ರಸಂಗಗಳಲ್ಲಿ ಧೈರ್ಯಕೊಡುವದಲ್ಲದೆ, ಅವನಿಗೆ ಒಳ್ಳೇ ದಾರಿಯನ್ನು ತೋರಿಸುತ್ತಿದ್ದಳು. ಶಹಜಾನನು ಈಕೆಯ ಸಲಹೆಯಿಲ್ಲದೆ ಯಾವ ಕೆಲಸವನ್ನು ಮಾಡುತ್ತಿದ್ದಿಲ್ಲ.

ಈಕೆಯು ಅರಮನೆಯನ್ನಾಳುವ ದೇವತೆಯಾಗಿರುವಂತೆ, ಶಹಜಾನನ ಹೃದಯ ದೇವತೆಯೂ ಆಗಿದ್ದಳು. ಇಂಥಾ ಕರ್ತವ್ಯತತ್ಪರಳಾದ ರಾಣಿ ಸಾಧ್ವಿಮಣಿಯು ರಾಜನ ಮತ್ತು ರಾಜ್ಯದ ದುರ್ದೈವದಿಂದ ಕ್ರಿ. ಶ. ೧೬೩೧ ರಲ್ಲಿ ಹಡೆದು ಸತ್ತಳು. ಗಂಡನೊಡನೆ ಹದಿನಾಲ್ಕುವರ್ಷ ಸುಖ ಸಂತೋಷದಿಂದ ಕಾಲ ಕಳೆದಿದ್ದಳು. ಸಾಯುವಾಗ ತನ್ನ ಗಂಡನನ್ನು ಕರೆಯಿಸಿ ತನ್ನ ಹೊರತು ತಾವು ಎರಡನೆಯ ಲಗ್ನವಾಗಬಾರದು. ತನ್ನ ಹೆಸರು ಅಮರವಾಗಿ ಉಳಿಯಲು ತನ್ನ ಗೋರಿಯ ಮೇಲೆ ಈ ಜಗತ್ತಿನಲ್ಲಿ ಅತ್ಯಂತ ಸುಂದರವಾದ ಕಟ್ಟಡವನ್ನು ಕಟ್ಟಿಸಬೇಕೆಂದು ಪ್ರಾರ್ಥಿಸಿದಳು.

ಶಹಜಾನನು ತನ್ನ ಹೃದಯ ದೇವತೆಯ ಅಗಲುವಿಕೆಗೆ ಕಣ್ಣೀರು ಸುರಿಸುತ್ತಾ, ಆಕೆಯ ಪ್ರಾರ್ಥನೆಯನ್ನು ಪೂರ್ಣ ಮಾಡುವೆನೆಂದು ವಚನವನ್ನಿತ್ತನು. ಮುಂದೆ ಆಕೆಯ ಗೋರಿಯ ಮೇಲೆ ಅತ್ಯಂತ ಸುಂದರವಾದ **ರೋಜಾಮಹಾಲ** ಅಥವಾ **ತಾಜಾಮಹಾಲ** ಎಂಬ ಹೆಸರಿನ ಜಗತ್ತನ್ನೇ ಬೆರಗುಗೊಳಿಸುವಂತ ಕಟ್ಟಡವನ್ನು, ಬಿಳಿಯ ಸಂಗಮರವರೀ ಕಲ್ಲುಗಳಿಂದ

ಕಟ್ಟಿಸಿದನು. **ಅದು ಆಗ್ರಾಪಟ್ಟಣದ ಯಮುನಾ ನದಿಯ ದಂಡೆಯ ಮೇಲಿದೆ.** ಅದು ಈಗಲೂ, ನಿನ್ನೆಯೋ? ಇಂದೋ? ನಿರ್ಮಿತವಾಗಿದೆಯೋ? ಏನೋ? ಎಂಬುವಂತಿದೆ. ಈ ಶಿಲೆಗಳಲ್ಲಿ ವಜ್ರಗಳನ್ನು ಕೂಡಿಸಿರುವರು. ಈ ಕಟ್ಟಡವು ಮುಗಿಯಲು ೩೦ ವರ್ಷಗಳು ಬೇಕಾದವಂತೆ. ಮತ್ತು ೩೦ ಲಕ್ಷ ರೂಪಾಯಿಗಳು ವೆಚ್ಚವಾದವಂತೆ, ಅಂತೂ ಶಹಜಾನನು ತನ್ನ ವಚನವನ್ನು ಪಾಲಿಸಿದನು. ಆಕೆಯ ಮಾತಿನಂತೆ ಮತ್ತೊಬ್ಬಳನ್ನು ಮದುವೆಯಾಗಲಿಲ್ಲ.

ಇದಲ್ಲದೆ ಶಹಜಾನನು **ದಿಲ್ಲಿಯಲ್ಲಿ ಜುಮ್ಮಾಮಸೀದಿಯನ್ನೂ, ಆಗ್ರಾ ಪಟ್ಟಣದಲ್ಲಿ ಬಹು ಸುಂದರವಾದ ಮೋತಿ ಮಸೀದಿಯನ್ನೂ ಕಟ್ಟಿಸಿದನು.** ಶಹಜಾನನ ಸಿಂಹಾಸನವು ಬಹು ಶೋಭಿತವಾಗಿತ್ತು. ಮತ್ತಾವ ಅರಸನದೂ ಇಂತಹ ಸಿಂಹಾಸನವಿರಲಿಲ್ಲ. ಅದು ಗರಿಯನ್ನು ಮೇಲೆ ಮಾಡಿ ನಿಂತ ದೊಡ್ಡದಾದ ನವಿಲಿನ ಆಕಾರವುಳ್ಳದಾಗಿತ್ತು. ಮತ್ತು ಏಶಿಯಾ ಖಂಡದಲ್ಲಿ **ಮಯೂರಾಸನ**ವೆಂದು ಹೆಸರಾಗಿದೆ. ಗರಿಗಳ ಬಣ್ಣಗಳನ್ನು ವ್ಯಕ್ತಗೊಳಿಸಲು ಅವುಗಳಲ್ಲಿ ವಜ್ರ, ನೀಲ, ಪಚ್ಚ, ಮಾಣಿಕ ಮೊದಲಾದ ರತ್ನಗಳು ಕೂಡಿಸಲ್ಪಟ್ಟಿವೆ.

ಈತರದ ಇವನ ಧಾರ್ಮಿಕ ಬುದ್ಧಿಗೆ ಇವನ ತಾಯಿಯೂ ಹೆಂಡತಿಯೂ ಕಾರಣರಾಗಿದ್ದರು. ತಾಯಿಯು ಧರ್ಮದೇವತೆಯಾಗಿದ್ದರೆ, ಮಕ್ಕಳು ಧರ್ಮಪರಾಯಣರಾಗುವರು. ಇಂಥವರಿಂದ ರಾಜ್ಯವು ಸುಖಮಯವಾಗುವದು.

---

# ಜೇಬುನ್ನೀಸಾ



ಈಕೆಯು ಔರಂಗಜೇಬನ ಮಗಳು. ಈಕೆಯು ಚಿಕ್ಕವಳಿರುವಾಗಲೆ ತಾಯಿಯು ತೀರಿಹೋಗಿದ್ದರಿಂದ, ಔರಂಗಜೇಬನು ಈಕೆಯನ್ನು ಬಹು ಪ್ರೀತಿಯಿಂದ ಸಾಕುತ್ತಿದ್ದನು. ಮಗಳಿಗೆ ತಾನೇ ಓದು ಬರಹವನ್ನು ಕಲಿಸಿದ್ದನು. ಈಕೆಯು ಬಾಲ್ಯದಲ್ಲಿಯೇ ಮಹಮ್ಮದೀಯ ಗ್ರಂಥವಾದ **ಖುರಾಣ**ವನ್ನು ಬಾಯಿಪಾಠವಮಾಡಿ ತಂದೆಗೆ ಒಪ್ಪಿಸಿದಳು. ಆಗ ಔರಂಗಜೇಬನು ಪರಮಾನಂದಭರಿತನಾಗಿ ಮಗಳಿಗೆ ಮೂರು ಸಾವಿರ ಮೋಹರುಗಳನ್ನು ಬಹುಮಾನ ಕೊಟ್ಟನು.

ಜೇಬುನ್ನೀಸಳು ಅತ್ಯಂತ ಸೌಂದರ್ಯವತಿಯು. ಆಗರ್ಭಶ್ರೀಮಂತಳಾದ ಈಕೆಯು, ವಿಶೇಷ ವಿಲಾಸದಿಂದ ಬೆಳೆದವಳಾದರೂ, ಈಶ್ವರದತ್ತವಾದ ತನ್ನ ಮೇಧಾಶಕ್ತಿಯನ್ನು, ನಿರುಪಯೋಗವಾದ ಕಾರ್ಯಗಳಲ್ಲಿ ವಿನಿಯೋಗಿಸದೆ ಮಹತ್ಕಾರ್ಯಗಳಲ್ಲಿಯೂ, ಪಾಂಡಿತ್ಯದಲ್ಲಿಯೂ ವಿನಿಯೋಗಿಸಿದಳು.

ಅರಬ್ಬಿ, ಪಾರಸಿ ಭಾಷೆಗಳಲ್ಲಿ ಈಕೆಯು ಅತ್ಯಂತ ಪಾಂಡಿತ್ಯವನ್ನು ಪಡೆದಿದ್ದಳು. ಈಕೆಯು ಬಹು ಸುಂದರವಾದ ಅಕ್ಷರಗಳನ್ನು ಬರೆಯುತ್ತಿದ್ದಳು. ಬಾಲ್ಯದಲ್ಲಿಯೇ ಈಕೆಗೆ ಕವಿತಾಶಕ್ತಿಯು ಉಂಟಾಯಿತು. ಪದ ರಚನೆಯಲ್ಲಿಯೂ, ಗದ್ಯ ರಚನೆಯಲ್ಲಿಯೂ ಈಕೆ ನಿಪುಣೆಯಿದ್ದಳು. ಈಕೆಯ ಕವಿತೆಗಳು ಸುಲಲಿತವಾಗಿಯೂ, ಭಾವ ಗಂಭೀರವಾಗಿಯೂ ಕೂಡಿ ಒಪ್ಪುತಲಿದ್ದವು. ಮಹಮ್ಮದೀಯ ಪಂಡಿತರು ಈಗಲೂ ಈಕೆಯು ರಚಿಸಿದ ಪದ್ಯಗಳನ್ನು ಓದಿ ಪರಮಾನಂದ ಪಡುತ್ತಲಿದ್ದಾರೆ.

ಈಕೆಯು ಅನೇಕ ಪಂಡಿತರಿಗೂ ವಿದ್ವಾಂಸರಿಗೂ ಆಶ್ರಯವನ್ನು ಕೊಟ್ಟು ಧನಸಹಾಯ ಮಾಡುತ್ತಿದ್ದಳು. ಈಕೆಯು ರಾಜ ಕಾರ್ಯದಲ್ಲಿ

ವಿಶೇಷ ಗೌರವವನ್ನು ಪಡೆದಿದ್ದಳು. ಔರಂಗಜೇಬನು ಈಕೆಯೊಡನೆ ಆಲೋಚಿಸದೆ ಯಾವ ಕಾರ್ಯವನ್ನೂ ಮಾಡುತ್ತಿರಲಿಲ್ಲ.

ಔರಂಗಜೇಬನು ತಂದೆಯನ್ನು ಸೆರೆಯಲ್ಲಿಟ್ಟಿದ್ದನು. ಮತ್ತು ಒಮ್ಮೆ ಅವನನ್ನು ಕೊಲ್ಲಬೇಕೆಂದೆಣಿಸಿದನು. ಜೇಬುನ್ನೀಸಳು ಈ ವಿಷಯವನ್ನು ಕೇಳಿ, ತಂದೆಗೆ ಅನೇಕ ಸದುಪದೇಶಗಳನ್ನು ಮಾಡಿ ಆತನನ್ನು ಪಿತೃಹತ್ಯ ಪಾತಕದಿಂದ ವಿಮುಕ್ತನನ್ನಾಗಿ ಮಾಡಿದಳು. ಈಕೆಯು ಶಿವಾಜಿಯನ್ನು ಹೆಚ್ಚಾಗಿ ಪ್ರೇಮಿಸುತ್ತಿದ್ದಳು. ಆತನ ವೀರತ್ವವನ್ನು ಕೇಳುತ್ತಾ ಆಕೆಯ ಹೃದಯದಲ್ಲಿ ಪ್ರೇಮವು ಪ್ರವಾಹದಂತೆ ಹರಿಯುತ್ತಲಿತ್ತು ಒಮ್ಮೆ ಶಿವಾಜಿಯು ಔರಂಗಜೇಬನ ದರ್ಬಾರಿಗೆ ಬಂದ ಸಮಯದಲ್ಲಿ, ಜೇಬುನ್ನೀಸಳು ಪರದೆಯ ಹಿಂದುಗಡೆ ನಿಂತುಗೊಂಡು, ಆತನ ಮುಖದರ್ಶನವನ್ನು ಮಾಡಿದಳು.

ತನ್ನ ಮನಃಕಲ್ಪಿತರಾಜ್ಯದಲ್ಲಿ ಯಾವ ಮಹಾವೀರನ ಗುಣಗಳನ್ನು ಕೇಳಿ ಸಂತೋಷಿಸುತ್ತಾ ಇದ್ದಳೋ, ಯಾವ ಪ್ರತಾಪಶಾಲಿಯು ಪ್ರತಾಪಕ್ಕೆ ಆತ್ಮಸಮರ್ಪಣೆಯನ್ನು ಮಾಡಿದ್ದಳೋ, ಯಾವ ಶೌರ್ಯಧುರ್ಯನ ನಾಮವನ್ನು ಪಂಚಾಕ್ಷರಿ ಮಂತ್ರದಂತೆ ಜಪಿಸುತ್ತಲಿದ್ದಳೋ, ಯಾವ ಮಹಾ ಪುರುಷನನ್ನು ತನ್ನ ಹೃದಯ ಸಿಂಹಾಸನದಲ್ಲಿ ಪ್ರತಿಷ್ಠಿಸಿ ಪೂಜಿಸುತ್ತಿದ್ದಳೋ, ಆ ತೇಜೋಮಯ ಮೂರ್ತಿಯಾದ ತನ್ನ ಆರಾಧ್ಯ ದೇವರು ತನ್ನ ನೇತ್ರ ಗೋಚರನಾದ ಸಮಯದಲ್ಲಿ ಈಕೆಯು ಪರವಶೆಯಾದಳು. ಈಕೆಯು ತನ್ನ ಪವಿತ್ರ ಹೃದಯವನ್ನು ಶಿವಾಜಿಯ ಪಾದಪದ್ಮಗಳಲ್ಲಿ ಸಮರ್ಪಿಸಿ ಕೃತಾರ್ಥಳಾದೆನೆಂದು ಸಂತೋಷಿಸಿದಳು.

ಆದರೆ ಔರಂಗಜೇಬನು ದರ್ಬಾರಿನಲ್ಲಿ ತಕ್ಕ ಹಾಗೆ ಗೌರವಿಸಲಿಲ್ಲ. ಆದರಿಂದ ಆ ಮಹಾರಾಷ್ಟ್ರವೀರನ ಶರೀರವು ಕಂಪಿಸಲಾರಂಭಿಸಿತು. ನೇತ್ರಗಳಿಂದ ಕೆಂಡಗಳೂ ಉರುಳಿದವು. ಆದರೆ ಆ ವೀರನು ತನ್ನ ಕರ್ತವ್ಯವನ್ನು ತಿಳಿದುಕೊಂಡು ತನ್ನ ಸಿಟ್ಟನ್ನು ಉಪಶಮನ ಮಾಡಿ ಕೊಂಡನು.

ಶಿವಾಜಿಯು ಈ ಸ್ಥಿತಿಯನ್ನು ನೋಡಿ ದರ್ಬಾರಿನಲ್ಲಿದ್ದ ಮಂತ್ರಿಗಳೆ ಮೊದಲಾದವರು ಪರಿಹಾಸ ಸೂಚಕವಾದ ನಗುವನ್ನು ನಕ್ಕರು. ಆದರೆ ಪರದೆಯ ಹಿಂದುಗಡೆ ನಿಂತು ಈ ದೃಶ್ಯವನ್ನು ನೋಡುತಲಿದ್ದ ಜೇಬುನ್ನೀಸಳ ಕಣ್ಣುಗಳಿಂದ ನೀರು ಸುರಿಯಿತು. ಈಕೆಯು ಸಾಮಾನ್ಯ ಸ್ತ್ರೀಯರಂತೆ ತನ್ನ ಪ್ರೇಮಾಸ್ಪದನಿಗೆ ಅವಮಾನ ಉಂಟಾಯಿತೆಂದು ದುಃಖಿಸಿದಳೇ? ಇಲ್ಲ. ಆ ಮಹಾವೀರನನ್ನು ಅತ್ಯಂತ ನಿರ್ದಯೆಯಿಂದ ಅವಮಾನಗೊಳಿಸಿದುದು, ಧರ್ಮವನ್ನು ಅವಮಾನಗೊಳಿಸಿದಂತಾಯಿತೆಂದು ಪರಿತಾಪವನ್ನು ಹೊಂದಿದಳು.

ದರ್ಬಾರ ಪೂರ್ತಿಯಾದ ಮೇಲೆ ಔರಂಗಜೇಬನು ಅಂತಃಪುರಕ್ಕೆ ಬಂದನು. ಕೂಡಲೆ ಜೇಬುನ್ನೀಸಳು ತಂದೆಯ ಬಳಿಗೆ ಹೋಗಿ "ಜಹಾಪನಾ, ಮಹಾ ಸಭೆಯಲ್ಲಿ ಆ ವೀರನನ್ನು ಅವಮಾನ ಮಾಡಬಹುದೇ? ಎಂದು ಕೇಳಿದಳು. ಈ ವಾಕ್ಯವು ಪೂರ್ತಿಯಾಗುವದರೊಳಗೆ ಆಕೆಯ ಕಣ್ಣುಗಳು ನೀರು ತುಂಬಿದವು. ಶಿರಸ್ಸು ಬಗ್ಗಿತು. ಮುಂದೆ ಮಾತನಾಡಲಾರದೆ ಹೋದಳು.

ಔರಂಗಜೇಬನು ಪುತ್ರಿಯ ಮಾತನ್ನು ಕೇಳಿ ವಿಸ್ಮಯನಾದನು. ತತ್‌ಕ್ಷಣವೇ ಆಕೆಯ ಹೃದಯದ ಭಾವವನ್ನು ಗ್ರಹಿಸಿ ಕುಪಿತನಾದನು. ಆದರೆ ಮಗಳಲ್ಲಿ ಅತ್ಯಂತ ವಾತ್ಸಲ್ಯವುಳ್ಳವನಾಗಿದ್ದುದರಿಂದ ಕೋಪವನ್ನು ತಡೆದುಕೊಂಡು "ಅವನು ಮುಸಲ್ಮಾನ ಮತವನ್ನು ಸ್ವೀಕರಿಸಿದರೆ, ಅವನ ಅಪರಾಧಗಳನೆಲ್ಲ ಕ್ಷಮಿಸುವೆನು. ಆಗ ನೀನು ಅವನನ್ನು ವಿವಾಹಮಾಡಿಕೊಳ್ಳಬಹುದು ಎಂದು ನುಡಿದನು. ಆ ಮಾತನ್ನು ಕೇಳಿದ ಕೂಡಲೆ ಜೇಬುನ್ನೀಸಳ ಹೃದಯವು ಲಜ್ಜೆಯಿಂದ ದಗ್ಧವಾಗಲಾರಂಭಿಸಿತು. ಆಕೆಯು ಶಿವಾಜಿಯನ್ನು ಮದುವೆಮಾಡಿಕೊಳ್ಳುವುದಕ್ಕೆ ಅನುಜ್ಞೆಯನ್ನು ಕೇಳಲು ತಂದೆಯ ಬಳಿಗೆ ಬಂದಿರಲಿಲ್ಲ. ವೀರನಿಗೆ ಸಂಭವಿಸಿದ ಅವಮಾನಕ್ಕೆ ಪ್ರತಿವಿಧಾನವನ್ನು ಮಾಡುವುದಕ್ಕೆ ಮಾತ್ರ ಬಂದಿದ್ದಳು, ಆದರೆ ಈ ವಿಷಯವನ್ನು ಕುರಿತು ಪುನಃ ಮಾತನಾಡಲಾರದೆ, ಹೃದಯ ಮಧ್ಯದಲ್ಲಿ ಬಹು ಭದ್ರವಾಗಿ, ಕಾದಿಟ್ಟ ರತ್ನವು ಹೊರಗೆ ಬಂದಿತು ಅಲ್ಲವೆ? ಎಂದು

ಪರಿತಪಿಸುತ್ತಾ, ತನ್ನನ್ನು ತಾನೆ ನಿಂದಿಸಿಕೊಳ್ಳುತ್ತಾ ಒಳಗೆ ಹೊರಟು ಹೋದಳು.

ಅಂದಿನಿಂದ ಜೇಬುನ್ನೀಸಳು ಶಿವಾಜಿಯಲ್ಲಿ ತನಗೆ ಇರುವ ಪ್ರೇಮವನ್ನು ಬಹು ಗುಪ್ತವಾಗಿ ಹೃದಯಾಂತರಾಳದಲ್ಲಿ ಪೋಷಿಸುತ್ತಾ ಇದ್ದಳು. ಈಕೆಯು ಶಿವಾಜಿಯನ್ನು ವಿವಾಹ ಮಾಡಿಕೊಳ್ಳಬೇಕೆಂಬ ಅಪೇಕ್ಷೆಯಿಂದ ಉನ್ಮಾದಿನಿಯಾಗಲಿಲ್ಲ. ಈಕೆಯ ಮಹಾ ಪ್ರೇಮವು ಪ್ರತಿಫಲ ಶೂನ್ಯವಾದುದು. ಈಕೆಯು ಶಿವಾಜಿಯಲ್ಲಿ ಅನುರಾಗಉಳ್ಳವಳಾಗಿರಲಿಲ್ಲ. ಶಿವಾಜಿಯ ವೀರತ್ವದಲ್ಲಿ ಅನುರಾಗವುಳ್ಳವಳಾಗಿದ್ದಳು. ಇದಕ್ಕೆ ಕಾರಣವು ಏನಂದರೆ:– ಈಕೆಯು ಶಿವಾಜಿಗೆ ಪರಮಶತ್ರುವಾದ ಔರಂಗಜೇಬನ ಮಗಳು, ಅದರಲ್ಲಿ ಮುಸಲ್ಮಾನಳು, ಆದುದರಿಂದ ಈಕೆಯು ಶಿವಾಜಯನ್ನು ವಿವಾಹಮಾಡಿಕೊಂಡರೆ, ಆತನ ಶೌರ್ಯ ಪ್ರತಾಪಗಳು ಪ್ರಕಾಶವಾಗಲಾರವು. ಮತ್ತು ಆತನ ತೇಜಸ್ಸು ದಿನ ದಿನ ಪ್ರವರ್ಧಮಾನವಾಗಲಾರದು, ಆದಕಾರಣ ಶಿವಾಜಿಯ ಎದುರಿಗೆ ತನ್ನ ಪ್ರೇಮವನ್ನು ಪ್ರಕಾಶ ಪಡಿಸಬೇಕೆಂದು ಈಕೆಯು ಯಾವಾಗಲೂ ಎಣಿಸಲಿಲ್ಲ.

ಕೊನೆಗೂ ಜೇಬುನ್ನೀಸಾ ಅವಿವಾಹಿತೆಯಾಗಿಯೇ ಇಹಲೋಕವನ್ನು ಬಿಟ್ಟಳು. ಈಕೆಯು ರಚಿಸಿದ ಪದಗಳಲ್ಲಿ ಈಕೆಯ ಪ್ರೇಮ ವಿಲಸನವು ಪರಿಸ್ಫುಟವಾಗುವದು. ಕಾವ್ಯರಾಜ್ಯದಲ್ಲಿ ಈಕೆಯು ತನ್ನ ಪ್ರೇಮವನ್ನು ಗುಪ್ತವಾಗಿಟ್ಟುಕೊಳ್ಳಲು ಅಶಕ್ಯೆಯಾದಳು. ಈಕೆಯು ರಚಿಸಿದ ಪದ್ಯಗಳ ಪ್ರತಿಪಾದದಲ್ಲಿಯೂ ಸ್ವಾರ್ಥರಹಿತವಾದ ಪ್ರೇಮದ ಆಕುಲಗಾನವು ಕರುಣಾರಸದೊಡನೆ ಪ್ರತಿಧ್ವನಿ ಸುತ್ತಲಿದೆ. ಅವುಗಳಲ್ಲಿ ಕೆಲವು ಪದ್ಯಗಳ ತಾತ್ಪರ್ಯವನ್ನು ಇಲ್ಲಿ ಉದಾಹರಿಸಿದೆ.

೧. ಪ್ರೇಮವಶಳಾದ "ಲಾಯಿಲಾ" ಪ್ರಿಯತಮನಾದ "ಮಜನೂನಿ"ಗಾಗಿ ಉನ್ಮದಿನಿಯಾಗಿ ಮರುಭೂಮಿಗಳಲ್ಲಿ ಓಡುತಲಿರುವ ಹಾಗೆ, ನಾನೂ ಸಹಾ ಓಡುತಲಿರಬೇಕೆಂದು ಎಣಿಸುತ್ತೇನೆ. ಆದರೆ ನನ್ನ ಪಾದಗಳೂ ಲಜ್ಜೆಯೆಂಬ ಶೃಂಖಲೆಗಳಿಂದ ಬಂಧಿತವಾಗಿವೆ.

೨. "ಬುಲ್ ಬುಲ್ ಎಂಬ ಪಕ್ಷಿಯು ಗುಲಾಬಿ ಪುಷ್ಪದ ಸುತ್ತಲೂ ತಿರುಗುತ್ತ, ಅದರೊಡನೆ ಪ್ರೇಮಾಲಾಪಗಳನ್ನೂ ಆಡುತ್ತಲಿದೆ. ಆದರೆ ಅದು ನನ್ನ ಬಳಿಯಲ್ಲಿಯೇ ಪ್ರೇಮಕಲೆಯನ್ನು ಕಲಿಯಿತು."

೩. ನನ್ನ ಸಮ್ಮುಖದಲ್ಲಿರುವ ಗುಲೋಬಿನಲ್ಲಿರುವ ನಿರ್ಮಲ ಜ್ಯೋತಿಯಲ್ಲಿ ಅನೇಕ ಪತಂಗಗಳೂ ಆತ್ಮವಿಸರ್ಜನೆಯನ್ನು ಮಾಡುತ್ತಲಿವೆ. ಆದರೆ ಅವು ಆತ್ಮವಿಸರ್ಜನೆಯನ್ನು ಮಾಡುವ ಬಗೆಯನ್ನು ನನ್ನಲ್ಲಿಯೇ ಕಲಿತು ಕೊಂಡವು.

೪. ಗೋರಂಟಿ ಎಲೆಯು ತನ್ನ ಹೊರಗೆ ಇರುವ ಶುಭ್ರ ಶ್ಯಾಮಲ ವರ್ಣದಿಂದ, ತನ್ನ ಒಳಗಿನ ರಕ್ತವರ್ಣವನ್ನು ಬಚ್ಚಿಟ್ಟುಕೊಂಡು ಇರುವಂತೆ, ನನ್ನ ಶಾಂತ ಮೂರ್ತಿಯು ಹೃದಯಾಂತರಾಳದಲ್ಲಿರುವ ತೀವ್ರಾನುರಾಗವನ್ನು ಗುಪ್ತವಾಗಿಟ್ಟಿದೆ.

೫. ನಾನು ಬಾದಷಹನ ಮಗಳು. ಆದರೆ ನನ್ನ ಪ್ರಾಣವು ಅತಿಥಿಯ ಹಾಗೆ ಇದೆ ಮಹದೈಶ್ವರ್ಯವು ನನಗೆ ಆನಂದವನ್ನುಂಟು ಮಾಡುವುದಿಲ್ಲ. ಆದಕಾರಣ ನನಗೆ ದರಿದ್ರ ದುಃಖವೇ ಹೆಚ್ಚಾಗಿದೆ. ನನ್ನ ಹೆಸರು ಜೇಬುನ್ನೀಸಾ (ಸುಂದರಿ ಶ್ರೇಷ್ಟಳು). ನನಗೆ ಈ ಸ್ವಲ್ಪ ಮಾತ್ರ ಗೌರವವು ಸಾಕು.

೬. ಎಲೈ ಮನಸ್ಸೆ! ಪ್ರೇಮ ವಿಷಯವನ್ನು ಕುರಿತು ಬಹಳ ಪ್ರಸಂಗವನ್ನು ಮಾಡಿರುವೆ. ಆದರೆ ಅದರಿಂದ ನಿನಗೆ ಏನು ಲಾಭವು ದೊರೆಯಿತು? ಅಶ್ರುಧಾರೆಗಳು ವಿನಹಾ ಮತ್ತೇನೂ ಇಲ್ಲ.

೭. ನನ್ನ ಹೃದಯ ದುಃಖದಲ್ಲಿ ಅಣುಮಾತ್ರವನ್ನು ಆಕಾಶಕ್ಕೆ ಕೊಟ್ಟಿದ್ದೇನೆ. ಆದುದರಿಂದಲೇ ಅದು ನೀಲಿ ಬಣ್ಣವಾಗಿ ಹೋಗುತ್ತಲಿದೆ.

೮. ಕೆಲವು ಮಂದಿ ಈ ಸಂಸಾರಕ್ಕೆ ಬಂದು ಸಂಕಲ್ಪಸಿದ್ಧಿಯನ್ನು ಪಡೆದು ಹೊರಡುತ್ತಲಿದ್ದಾರೆ; ಆದರೆ ಜೇಬುನ್ನೀಸಳು ಮಾತ್ರ ಯಾರೊಡನೆಯೂ ಹೊಂದಲಿಲ್ಲವಲ್ಲವೇ?

---

# ಚಾಂದಬೀಬಿ



ಇತಿಹಾಸ ಪ್ರಸಿದ್ಧವಾದ ವಿಜಾಪುರ ಪಟ್ಟಣವು ಬಹು ನೋಡ ತಕ್ಕಂಥಾದ್ದಿದೆ. ಆ ಪಟ್ಟಣವನ್ನು ಅನೇಕ ರಾಜರು ಆಳಿಹೋದರು. ಅವರ ಪೈಕಿ ಅಲ್ಲಿಆದಿಲಶಹನೊಬ್ಬನು ಇವನು ೧೫೫೭ರಲ್ಲಿ ಪಟ್ಟವೇರಿದನು. ಇವನ ಹೆಂಡತಿಯೇ ಶೂರ ಚಾಂದಬೀಬಿಯು. ಈಕೆಯು ಅಹಮ್ಮದ ನಗರದ ನಿಜಾಮಶಾಹಿಯ ಮಗಳು. ಈಕೆಯ ವಿಷಯವಾಗಿ ನಮಗೆ ಬಹಳ ಸಂಗತಿಯು ದೊರೆತಿಲ್ಲವಾದರೂ, ದೊರೆತಷ್ಟು ಬರೆಯುವೆವು.

ಈಕೆಯು ತನ್ನ ಮದುವೆಯಾದ ಸುಮಾರು ಇಪ್ಪತ್ತು ವರ್ಷಗಳ ವರೆಗೆ, ಗಂಡನ ಕೂಡ ಬಹು ಸುಖವಾಗಿ ಕಾಲ ಕಳೆದಳು. ಈಕೆಗೆ ಬಹು ದಿವಸದ ಮೇಲೆ ಒಂದು ಪುತ್ರ ಸಂತಾನವಾಯಿತು. ಅವನ ಹೆಸರು ಇಮ್ಮಡಿ ಇಬ್ರಾಹೀಮ. ಈಕೆಗೆ ಮಕ್ಕಳೇ ಆಗಿದ್ದಿಲ್ಲ, ಅವನು ಅಲ್ಲಿ ಆದಿಲ ಶಹನ ತಮ್ಮನ ಮಗನೆಂದೂ ಹೇಳುವರು.

ಇಮ್ಮಡಿ ಇಬ್ರಾಹಿಮನ ಮಗನು ಒಂಭತ್ತು ವರ್ಷದವನಿದ್ದಾಗ, ಅವನ ತಂದೆಯು ಕ್ರಿ. ಶ ೧೫೭೯ರಲ್ಲಿ ಗೋವೆಯ ಮುತ್ತಿಗೆಯಲ್ಲಿ ಕೊಲ್ಲಲ್ಪಟ್ಟನು. ಇವನು ಬಹು ಧಾರ್ಮಿಕನು. ಅಂತೆಯೇ ಇವನು ಐದು ಸಾವಿರ ಜನರಿಗೆ ದೇವರ ಪ್ರಾರ್ಥನೆಗೆ ಅನುಕೂಲವಾಗುವಂತಹ ಭವ್ಯವಾದ **ಜುಮ್ಮಾಮಸೀದೆ**ಯನ್ನು ಕಟ್ಟಿಸಿದನು. ಗಂಡನು ಯುದ್ಧದಲ್ಲಿ ಮಡಿದ ವಾರ್ತೆಯನ್ನು ಕೇಳಿ, ಚಾಂದಬೀಬಿಯು ಬಹು ದುಃಖದಲ್ಲಿ ಒರಗಿದಳು. ಇತ್ತ ಪತಿ ವಿಯೋಗದ ದುಃಖ. ಅತ್ತ ಮಗನು ಸಣ್ಣವನು. ಮತ್ತೆ ಪರರಾಜರು ಮೇಲೇರಿ ಬರುವ ದುಃಖ, ಈ ಎರಡು ದುಃಖವನ್ನು ನುಂಗಿಕೊಂಡು, ತನ್ನ ಮಗನನ್ನು ಪಟ್ಟಕ್ಕೆ ಕೂಡ್ರಿಸಿ, ಅವನ ಹೆಸರಿನಿಂದ ಮತ್ತು ಕಾಮಿಲಖಾನ

ನೆಂಬ ವಜೀರನ ನೆರವಿನಿಂದ ತಾನೇ ರಾಜ್ಯಕಾರಭಾರವನ್ನು ನಿರ್ವಹಿಸ ಹತ್ತಿದಳು. ಈಕೆಯು ಶೂರಳೂ, ನ್ಯಾಯ ನೀತಿಗಳಲ್ಲಿ ದಕ್ಷಳೂ ಆಗಿದ್ದಳು. ಆದರೆ ಕಾಮಿಲಖಾನನು ದುಷ್ಟ ಬುದ್ಧಿಯಿಂದ ಈ ರಾಜ್ಯವನ್ನೇ ನುಂಗ ಬೇಕೆಂದು ಹವಣಿಸಿದನು. ಆದ್ದರಿಂದ ಅವನನ್ನು ಸೆರೆಮನೆಯಲ್ಲಿಡಿಸಿ, ಚಾಂದಬೀಬಿಯು ಕಿಶ್ವರಖಾನನೆಂಬ ಮಂತ್ರಿಯ ಕಡೆಗೆ ರಾಜ್ಯಭಾರವನ್ನೆಲ್ಲಾ ಒಪ್ಪಿಸಿದಳು.

ಇವನೂ ಮಹಾ ದುಷ್ಟನಾಗಿದ್ದನು. ಇವನು ಸ್ವತಃ ಚಾಂದಬೀಬಿಯನ್ನೇ ಸೆರೆ ಹಿಡಿದು, ಸಾತಾರೆಯ ಕೋಟೆಯಲ್ಲಿಟ್ಟು ಮನಬಂದಂತೆ ಪ್ರಜೆಗಳನ್ನು ಪೀಡಿಸಹತ್ತಿದನು. ಆಗ ಪ್ರಜೆಗಳು ಇವನ ಉಪಟಳವನ್ನು ತಡೆಯಲಾರದೆ, ಇವನನ್ನು ಕೊಲ್ಲುವದಕ್ಕೆ ಪ್ರಯತ್ನ ಮಾಡಲು, ಗುಪ್ತರೀತಿಯಿಂದ ಇವನು ಅಹಮ್ಮದನಗರಕ್ಕೆ ಓಡಿ ಹೋದನು. ಆ ಬಳಿಕ ಪ್ರಜೆಗಳು ಚಾಂದಬೀಬಿಯನ್ನು ಸಾತಾರೆಯ ಸೆರೆಮನೆಯಿಂದ ಬಿಡುಗಡೆ ಮಾಡಿದರು.

ಮುಂದೆ ಚಾಂದಬೀಬಿಯ ಕೈಯ್ಯಲ್ಲಿ ರಾಜ್ಯದಾಡಳಿತೆಯನ್ನು ಒಪ್ಪಿಸಿದರು. ಇದೇ ವೇಳೆಯಲ್ಲಿ ಅಹಮ್ಮದನಗರದ ನಿಜಾಮುಶಹನೂ, ಗೋವಳಕೊಂಡದ ಕುತುಬಶಹನೂ, ವಿಜಾಪುರದ ಮೇಲೆ ದಂಡೆತ್ತಿ ಬಂದರು. ಆಗ ದಿಲಾವರಖಾನ ಮತ್ತು ಅಬ್ದುಲಹುಸೇನರೆಂಬ ಶೂರ ಸರದಾರರ ಸಹಾಯದಿಂದ ಚಾಂದಬೀಬಿಯು ಅವರನ್ನು ಹೊಡೆದೋಡಿಸಿ ವಿಜಾಪುರವನ್ನು ಕಾಪಾಡಿದಳು. ಮುಂದೆ ದಿಲಾವರಖಾನನೇ ಇಮ್ಮಡಿ ಇಬ್ರಾಹೀಮ ಆದಿಲಶಹನ ಮುಖ್ಯ ಪ್ರಧಾನನಾದನು

ಇಮ್ಮಡಿ ಇಬ್ರಾಹಿಮನು ಪ್ರಾಪ್ತ ವಯಸ್ಕನಾದ ಮೇಲೆ ತನ್ನ ತಾಯಿಯ ಅನುಮತಿಯಂತೆ ೩೦ ವರ್ಷ ಬಹು ಸುಖವಾಗಿ ರಾಜ್ಯವಾಳಿದನು. ಇವನ ಆಳಿಕೆಯಲ್ಲಿ ಯುದ್ಧಗಳು ಬಹಳ ಜರುಗಲಿಲ್ಲ. ರಾಜ್ಯವು ಮೈಸೂರ ವರೆಗೆ ಹಬ್ಬಿತ್ತು. ರಾಜ್ಯವನ್ನು ಸುಸೂತ್ರವಾಗಿ ಜರುಗಿಸಿದ ಆದಿಲಶಾಹಿ ವಂಶದವರಲ್ಲಿ ಇವನು ಒಳ್ಳೇ ಹೆಸರುವಾಸಿಯಾಗಿದ್ದನು. ಇವೆಲ್ಲಕ್ಕೂ ಅವನ ತಾಯಿಯಾದ ಚಾಂದಬೀಬಿ ರಾಣಿಯು ಕಾರಣಳಾಗಿದ್ದಳು.

ಈಕೆಯು ಬಹು ಗಟ್ಟಿಗಳು. ಧೃಡಕಾಯದವಳು ಮತ್ತು ಚಾಣಾಕ್ಷಳು ಇದ್ದಳು. ಅಂತೆಯೇ ಕ್ರಿ. ಶ. ೧೫೪೬ರಲ್ಲಿ ದಿಲ್ಲಿ ಅಕಬರನ ಕೂಡ ಯುದ್ಧ ಮಾಡಿ ಹೆಸರುವಾಸಿಯಾಗಿದ್ದಳು. ಮುಂದೆ ಇಮ್ಮಡಿ ಇಬ್ರಾಹಿಮನು ಕ್ರಿ. ಶ. ೧೫೪೬ರಲ್ಲಿ ಮೃತಪಟ್ಟನು ತಾಯಿಯು ಮೊದಲು ತೀರಿದಳೋ ಮಗನು ಮೊದಲು ತೀರಿದನೋ ತಿಳಿಯದು. ಚಾಂದಬೀಬಿಯ ಮೊಮ್ಮಗನಾದ ಮಹಮ್ಮದಶಹಾ ಯೆಂಬುವನು ತನ್ನ ತಂದೆಯಾದ ಇಮ್ಮಡಿ ಇಬ್ರಹಿಮನ ಗೋರಿಯನ್ನು "**ಇಬ್ರಾಹಿಮ ರೋಜ**" ಯೆಂಬ ಹೆಸರಿನಿಂದ ಬಹು ಸುಂದರವಾದ ಗೋರಿಯನ್ನು ಕಟ್ಟಿಸಿದ್ದಾನೆ. ಮಹಮ್ಮದಶಹನ ಗೋರಿಯು "**ಗೋಳಗುಮುಟ**"ವೆಂಬ ಹೆಸರಿನಿಂದ ಜಗತ್ಪ್ರಸಿದ್ಧವಾಗಿದೆ.

ಮುಸಲ್ಮಾನ ಹೆಣ್ಣು ಮಕ್ಕಳಲ್ಲಿ ಬಹುಮಂದಿ ಹೆಣ್ಣುಮಕ್ಕಳು ರಾಜ್ಯವನ್ನಾಳಿದ್ದಾರೆ. ಅವರ ಪೈಕಿ ನಮಗೆ ಗೊತ್ತಿರುವವರೆಂದರೆ; ನೂರಜಹಾನ ಸುಲ್ತಾನ ರಝಿಯ, ಅಮಿಹಮಿದಮ್ ಬೇಗಂ ಮುಂತಾದವರು.

ಮುಸಲ್ಮಾನ ಹೆಣ್ಣುಮಕ್ಕಳು ಪರದೆಯೊಳಗಿದ್ದರೂ, ರಾಜಕೀಯ ವಿಷಯಗಳನ್ನು ಚನ್ನಾಗಿ ಅಭ್ಯಾಸಮಾಡಿ, ಗಂಡಸರಂತೆ ರಾಜ್ಯಭಾರ ಮಾಡಿರುವರು. ರಾಜಾಸ್ಥಾನಕ್ಕೆ ಬರುವಾಗ ಕೆಲವು ರಾಣಿಯರು ಪುರುಷರ ಉಡುಪನ್ನು ಧರಿಸಿ ಬರುತ್ತಿದ್ದರು. ನೂರಜಹಾನ ರಾಣಿಯು ಜಹಂಗೀರನ ಕೂಡ ಕುದುರೆ ಹತ್ತಿ ಬೇಟೆಗೆ ಹೋಗುತ್ತಿದ್ದಳು. ಎದುರಿಗೆ ನಿಂತು ಹುಲಿಯನ್ನು ಹೊಡೆಯುತ್ತಿದ್ದಳಂತೆ, ಸ್ತ್ರೀಯರು ಮುಂದುವರಿಯುವದಾಗಲೀ ಅಥವಾ ಹಿಂದೆ ಬೀಳುವದಾಗಲೀ ಅದೆಲ್ಲಾ ಪುರುಷರ ಕೈಯಲ್ಲಿದೆ.

---

# ಝಾಂಸಿ ಲಕ್ಷ್ಮೀಬಾಯಿ



ಈ ನಮ್ಮ ಕಥಾನಾಯಕಿಯು ಝಾಂಸಿಯ ಮಹಾರಾಜನಾಗಿದ್ದ ಗಂಗಾಧರರಾಯನ ಧರ್ಮ ಪತ್ನಿಯು. ಈಕೆಯ ಮೊದಲನೆಯ ಹೆಸರು **ಮನೂಬಾಯಿ.** ಈಕೆಯು ಒಬ್ಬ ಸಾಮಾನ್ಯ ಬ್ರಾಹ್ಮಣನ ಮಗಳು. ಚಿಕ್ಕಂದಿನಲ್ಲಿಯೆ ತಾಯಿಯು ತೀರಿಹೋಗಿದ್ದರಿಂದ, ತಂದೆಯು ಈಕೆಯನ್ನು ಗಂಡು ಮಗನಂತೆ ಅತ್ಯಂತ ಪ್ರೀತಿಯಿಂದ ಸಾಕಿದ್ದನು. ಮನೂಬಾಯಿಯು ಯಾವಾಗಲೂ ಅರಮನೆಯ ಮಕ್ಕಳೊಡನೆ ಆಟವಾಡುತ್ತಿದ್ದಳು.

ಒಂದು ದಿವಸ ಅರಮನೆಯ ರಾಜಪುತ್ರರಾದ ನಾನಾಸಾಹೇಬ ಮತ್ತು ರಾವಸಾಹೇಬ ಇವರು ಆನೆಯನ್ನು ಹತ್ತಿಕೊಂಡು ಹೋಗುತ್ತಿದ್ದರು. ಆಗ ಏಳು ವರ್ಷದ ಈ ಮನೂಬಾಯಿಯು ಸಲಿಗೆಯಿಂದ ಅಣ್ಣಾಗಳಿರಾ! ನನ್ನನ್ನು ಆನೆಯ ಮೇಲೆ ಹತ್ತಿಸಿಕೊಳ್ಳಿರೆಂದು ಕೇಳಿದಳು. ಆಗ ಅವರು ಆಕೆಯನ್ನು ಹತ್ತಿಸಿಕೊಳ್ಳಲಿಲ್ಲ. ಬಾಲಿಕೆಯು ಅಂಗಲಾಚಿ ಬೇಡಿಕೊಂಡಳು. ಆದರೂ ಅವರು ಕಿವಿಗೊಡಲಿಲ್ಲ. ಆಗ ಹುಡಿಗಿಯು ಒಂದೇ ಸವನೆ ಅಳಹತ್ತಿದಳು. ತಂದೆಯು ಬಂದು "ಮಗೂ ಸುಮ್ಮನಾಗು. ಅಳಬೇಡ. ಆನೆಯ ಮೇಲೆ ಹತ್ತುವಷ್ಟು ಪುಣ್ಯ ನಮ್ಮಲ್ಲಿ ಎಲ್ಲಿದೆ?" ಎಂದನು. ಆಗ ಮಗಳು:— ಅಪ್ಪಾ! ಹೀಗೇಕೆ ನುಡಿಯುವೀ? ಅದೃಷ್ಟವಿದ್ದರೆ ಇಂಥಾ ಹತ್ತು ಆನೆಗಳನ್ನು ಕಟ್ಟುವೆನು, ಎಂದು ಥಟ್ಟನೆ ನುಡಿದಳು.

ಮುಂದೆ ತಂದೆಯು ಮಗಳು ಸ್ವಲ್ಪ ದೂರ ಹೋಗುವಷ್ಟರಲ್ಲಿ, ಒಬ್ಬ **ಮಹಾ ಸಾಧುಪುರುಷನು** ಭೆಟ್ಟಿಯಾದನು. ಆತನು "ಜಯ ರಘುವೀರ ಸಮರ್ಥ!" ಎಂದು ನಿಂತನು. ಆಗ ತಂದೆ ಮಗಳಿಬ್ಬರೂ ಆ ಮಹಾತ್ಮನಿಗೆ ನಮಸ್ಕಾರ ಮಾಡಿದರು. ಆಗ ಮಹಾತ್ಮನು ಮನೂಬಾಯಿಯನ್ನು ಹತ್ತಿರ ಕರೆದು, ತಲೆಯ ಮೇಲೆ ಬೆನ್ನಿನಮೇಲೆ ಕೈಯಾಡಿಸುತ್ತ "ಮನೂ ಇಂದು ನಡೆದ ಸಂಗತಿಯನ್ನು ಕೇಳಿದೆನು. ನೀನು ನಿಜವಾಗಿ ಮಹಾರಾಣಿ

ಯಾಗುವಿ. ನೀನು ಹೇಳಿದಂತೆ ನಿನ್ನ ಅದೃಷ್ಟದಲ್ಲಿ ಹತ್ತಿಪ್ಪತ್ತು ಆನೆಗಳನ್ನು ಕಟ್ಟುವದು ನಿಜ. ಆದರೆ ಮನೂ ಏನು ಹೇಳಲಿ? ನಿನಗೆ ಪ್ರಪಂಚದಲ್ಲಿ ಸುಖವಿಲ್ಲ. ವಿಪತ್ತುಗಳು ಬಹಳ. ಆದರೂ ಅಂಜದಿರು. ಧರ್ಮವನ್ನು ಕಾಪಾಡಿಕೊ. ಧರ್ಮವು ನಿನ್ನನ್ನು ಕಾಪಾಡುವದು" ಎಂದು ಹೇಳಿ ಆ ಸಾಧುವು ಮುಂದೆ ಹೊರಟು ಹೋದನು.

ಆಗ ತಂದೆಯು ಆಶ್ಚರ್ಯದಿಂದ ಮಗಳೊಡನೆ ಮನೆಗೆ ಬಂದು ಸೇರಿದನು. ಮುಂದೆ ಕೆಲವು ವರ್ಷಗಳ ಮೇಲೆ ಆ ಮಹಾಪುರುಷನ ಭವಿಷ್ಯದಂತೆ, ಝಾನ್ಸಿಯ ಮಹಾರಾಜನಾದ **ಗಂಗಾಧರರಾಯ**ನೊಡನೆ ಮನೂಬಾಯಿಯ ವಿವಾಹ ಸಮಾರಂಭವು ೧೮೪೨ರಲ್ಲಿ ಬಹು ವೈಭವದಿಂದ ಜರುಗಿತು. ಗೃಹ ಪ್ರವೇಶದ ದಿವಸ ಮನೂಬಾಯಿಯು, ವಸ್ತ್ರಾಭರಣಗಳಿಂದ ಭೂಷಿತಳಾಗಿ ಝಾನ್ಸಿಯ ಅರಮನೆಯನ್ನು ಪ್ರವೇಶಿಸುವಾಗ, ಪ್ರತ್ಯಕ್ಷ ಲಕ್ಷ್ಮೀದೇವಿಯಂತೆ ಹೊಳೆದುದರಿಂದ, ಅವಳಿಗೆ **ಲಕ್ಷ್ಮೀಬಾಯಿ** ಎಂದು ಹೆಸರಿಟ್ಟರು. "ಅಂದು ಒಬ್ಬ ಸಾಮಾನ್ಯ ಬ್ರಾಹ್ಮಣನ ಮಗಳಾಗಿದ್ದ ಮನೂಬಾಯಿಯು, ಇಂದು **ಮಹಾರಾಣಿ ಲಕ್ಷ್ಮೀಬಾಯಿಯಾದಳು.**" ವಿಧಿಯ ಮಹಿಮೆಯು ಅಗಾಧವಾದದ್ದು. ಯಾವ ಕಾರ್ಯವು ನಮಗೆ ಕೇವಲ ಕಲ್ಪನಾತೀತವಾಗಿರುವದೋ, ಅಂದರೆ ಯಾವುದು ಕಲ್ಪನೆಗೂ ನಿಲುಕಲಾರದೋ, ಅಂಥಹ ಅಘಟಿತ ಘಟನೆಯನ್ನು ದೈವವು ನಿರಾಯಾಸವಾಗಿ ನೆರವೇರಿಸಬಲ್ಲದು.

ಮುಂದೆ ಒಂದು ವರ್ಷದ ಮೇಲೆ ಲಕ್ಷ್ಮಿಬಾಯಿಯು ಒಂದು ಗಂಡು ಮಗುವನ್ನು ಹೆತ್ತಳು. ಆದರೆ ದೈವದ ಅವಕೃಪೆಯಿಂದ ಆ ಮಗುವು ಅಲ್ಪಾವಧಿಯಲ್ಲಿಯೇ ಅಕಾಲ ಮರಣಹೊಂದಿ, ತಂದೆ-ತಾಯಿಗಳಿಗೆ ಪುತ್ರಶೋಕವನ್ನುಂಟುಮಾಡಿತು. ಈ ದುಃಖವನ್ನು ನುಂಗುವದರೊಳಗೆ ಲಕ್ಷ್ಮಿಬಾಯಿಯು ಮತ್ತೆ ಅತ್ಯಂತ ಶೋಕಕ್ಕೆ ಗುರಿಯಾದಳು. ಪ್ರೀತಿಯ ಪತಿಯಾದ ಗಂಗಾಧರರಾಯನು ಪುತ್ರಶೋಕದಿಂದ ಸ್ವರ್ಗಸ್ಥನಾದನು. ಪತಿಯ ವಿರಹ ತಾಪವನ್ನು ತಾಳಲಾರದೆ ಲಕ್ಷ್ಮಿಬಾಯಿಯು, ರಾಜವೈಭವವನ್ನೆಲ್ಲಾ ತ್ಯಾಗ ಮಾಡಿ, ಕೇವಲ ವಿರಾಗಿಣಿಯಂತೆ, ಅಂತಃಪುರದಲ್ಲಿ ದೇವರ ಪ್ರಾರ್ಥನೆಯಲ್ಲಿ ಕಾಲ ಕಳೆಯಲಾರಂಭಿಸಿದಳು.

ಮುಂದೆ ರಾಜ್ಯದಲ್ಲಿ ಅವ್ಯವಸ್ಥೆಯಾಯಿತು. ಬಂಡುಗಾರರು ರಾಣಿಯ ಮಾತಿಲ್ಲದೆ ಬ್ರಿಟಿಷರ ವಿರುದ್ಧ ಹಾವಳಿಯನ್ನೆಬ್ಬಿಸಿದರು. ಯುರೋಪಿಯನ್ನರನ್ನು ಕೊಂದರು. ಅವರ ಬಂಗ್ಲೆಗಳನ್ನು ಸುಟ್ಟರು. ಇದರಿಂದ ರಾಣಿಗೆ ಬಹು ವ್ಯಥೆಯಾಯಿತು. ಉಳಿದಾದ ಇಂಗ್ರೇಜಿ ಜನರನ್ನು ತನ್ನ ಅರಮನೆಯಲ್ಲಿ ಇಟ್ಟುಕೊಂಡು ಸಂರಕ್ಷಿಸಿದಳು. ಆದರೆ ಈ ಬಂಡಾಯಕ್ಕೆ ಮತ್ತು ಕೊಲೆಗೆ ರಾಣಿಯೇ ಮುಖ್ಯ ಕಾರಣಳೆಂದು, ಆಕೆಯ ವಿರೋಧಿಗಳು ಬ್ರಿಟಿಷರಿಗೆ ತಿಳಿಸಿದರು.

ಲಕ್ಷ್ಮೀಬಾಯಿಯ ಹೃದಯವನ್ನರಿಯದ ಬ್ರಿಟಿಷ ಸರದಾರ **ಸರ್ ಹ್ಯೂರೋಜನು**, ಬಲವಾದ ಸೈನ್ಯದೊಡನೆ ಬಂದು ಝಾನ್ಸಿ ಕೋಟೆಗೆ ಮುತ್ತಿಗೆ ಹಾಕಿದನು. ಅವರೊಡನೆ ಲಕ್ಷ್ಮೀಬಾಯಿಯು ಅವಿಶ್ರಾಂತವಾಗಿ ೩ ತಿಂಗಳ ವರೆಗೆ ಯುದ್ಧವನ್ನು ಮಾಡಿ ಹೋರಾಡಿದಳು. ದುರ್ದೈವದಿಂದ ನಗರವು ಶತ್ರುಗಳ ವಶವಾಯಿತು. ರಾಣಿಯು ಶತ್ರುಗಳ ಹಸ್ತಸ್ಪರ್ಶಕ್ಕೆ ಈಡಾಗಬಾರದೆಂದು ಪುರುಷವೇಷವನ್ನು ಧರಿಸಿ, ಉಕ್ಕಿನ ತಂತಿಯ ಕವಚವನ್ನು ತೊಟ್ಟು, ಕೈಯಲ್ಲಿ ಖಡ್ಗವನ್ನು ಹಿಡಿದು, ಬಹು ಬೆಲೆಬಾಳುವ ಕುದುರೆಯನ್ನೇರಿ, ತನ್ನ ಹಿತಚಿಂತಕರಿಗೆಲ್ಲಾ ಹೇಳಿ, ಕಣ್ಣೀರ ಸುರಿಸುತ್ತಾ ಅರಮನೆಯನ್ನು ಬಿಟ್ಟು ಹೊರಟಳು. ಆಗ ಮಧ್ಯರಾತ್ರಿ ಮಹಾರಾಣಿಯು ತನ್ನ ಪ್ರೀತಿಯ ದತ್ತಕ ಮಗನನ್ನು ಬೆನ್ನಿಗೆ ಕಟ್ಟಿಕೊಂಡು ಹೊರಟಳು. ದಾರಿಯಲ್ಲಿ ಅಡ್ಡಬರುವ ಶತ್ರುಗಳನ್ನು ತರಿದಳು.

ಒಂದೇ ದಿನದಲ್ಲಿ ೧೦೨ ಮೈಲು ಕುದುರೆ ಪ್ರವಾಸಮಾಡಿ ರಾತ್ರಿ ೧೧ ಗಂಟೆಗೆ ಕಾಲ್ಪಿಗೆ ಹೋಗಿ ಶ್ರೀಮಂತ ಪೇಶ್ವೆ **ನಾನಾಸಾಹೇಬನ** ಮೊರೆಹೊಕ್ಕಳು ಇಡೀ ದಿವಸ ಆಕೆ ಬಾಯಲ್ಲಿ ಗುಟುಕು ನೀರು ನುಂಗಿದ್ದಿಲ್ಲ. ಕಾಲ್ಪಿಗೆ ಮುಟ್ಟಿದ ಕೂಡಲೇ ರಾಣಿಯ ಪ್ರೀತಿಯ ಕುದುರೆಯು ದೊಪ್ಪನೆ ನೆಲಕ್ಕೆಬಿದ್ದು ಸತ್ತುಹೋಯಿತು. ರಾಣಿಯು ಬಹು ದುಃಖದಿಂದ ಅದರ ಮೇಲೆ ಬಿದ್ದು ಅತ್ತಳು.

ಪುನಃ ರಾಣಿಯು ಪೇಶ್ವೆಯವರನ್ನೊಡಗೊಂಡು ಝಾನ್ಸಿಯನ್ನು ತೆಗೆದುಕೊಳ್ಳಲು ಮತ್ತೆ ಯುದ್ಧವನ್ನು ಸುರುವುಮಾಡಿದಳು. ಆದರೆ ದುರ್ದೈವವು ಅಲ್ಲಿಯೂ ಆಕೆಯ ಬೆನ್ನಟ್ಟಿ ಬಂದಿತು. ಎದುರಿಗಿರುವ

ಚಿಕ್ಕದೊಂದು ಹಳ್ಳದ ಪ್ರವಾಹವನ್ನು ನೋಡಿ, ಆಕೆಯ ಕುದುರೆಯು ಕಲ್ಲಿನಂತೆ ಥಟ್ಟನೆ ನಿಂತು ಬಿಟ್ಟಿತು. ಏನು ಪ್ರಯತ್ನ ಮಾಡಿದರೂ ಆ ಕುದುರೆ ಮುಂದಕ್ಕೆ ಒಂದು ಹೆಜ್ಜೆ ಸಹಾ ಇಡಲಿಲ್ಲ. ಈ ಸಂದರ್ಭದಲ್ಲಿ ಪ್ರಬಲರಾದ ಬ್ರಿಟಿಷ ಸರದಾರನೊಬ್ಬನ ಬಲವಾದ ಕತ್ತಿಯ ಕಡಿತದಿಂದ, ಮಹಾರಾಣಿಯ ತಲೆಯ ಬಲಭಾಗವು ಹಾರಿಹೋಯಿತು. "ಜಯರಘುವೀರ ಸಮರ್ಥ" ಎನ್ನುತ್ತ ಭವ್ಯಾಕಾರದ ಪುರುಷನೊಬ್ಬನು ಬಂದು, ಕೈ ನೀಡಿ ಮಹಾರಾಣಿಯನ್ನು ಕುದುರೆಯಿಂದ ಇಳಿಸಿಕೊಂಡು, ತನ್ನ ಪರ್ಣ ಕುಟೀರಕ್ಕೆ ಒಯ್ದು ಹುಲ್ಲು ಹಾಸಿಗೆಯ ಮೇಲೆ ಮಲಗಿಸಿದನು. ಒಳಗಿನಿಂದ ತನ್ನ ಕಮಂಡಲು ತಂದು, ಮಹಾರಾಣಿಯ ಬಾಯಿಗೆ ತೀರ್ಥವನ್ನೆರೆದನು. "ಮಗಳೇ ಭಗವಂತನನ್ನು ಸ್ಮರಿಸು, ಈ ಸಂದರ್ಭದಲ್ಲಿ ಇನ್ನು ಈ ಲೋಕದ ಯೋಚನೆ ಬೇಡ. ಆ ಲೋಕದಲ್ಲಿ ಮನಸ್ಸಿಡು" ಎಂದನು.

ಮಹಾರಾಣಿಗೆ ಮಾತಾಡಲು ಶಕ್ತಿಯಿರಲಿಲ್ಲ. ಆಕೆಯು ಮಗನಾದ ದಾಮೋದರನ ಕಡೆಗೆ ದೃಷ್ಟಿಯನ್ನು ತಿರುಗಿಸಲು, ಸ್ವಾಮಿಯು "ಮಗೂ ನಾನರಿಯದುದು ಯಾವುದೂ ಇಲ್ಲ. ಎಲ್ಲವೂ ಈಶ್ವರಾಧೀನವಾದುದು. ನೀನು ಮಾಡತಕ್ಕದ್ದನ್ನೆಲ್ಲಾ ಮಾಡಿದೆ. ಇನ್ನು ಆತನ ಇಚ್ಛೆಯಿದ್ದಂತೆ ಆದೀತು, ನಾನು ಈ ಹಿಂದೆ ನಿನಗೆ ಎರಡು ಮೂರು ಸಾರೆ ದರ್ಶನ ಕೊಟ್ಟಿರುವೆ. ಸದಾ ನಿನ್ನನ್ನು ಅನುಸರಿಸಿಯೇ ಇದ್ದೇನೆ. ಈಗ ನಿನಗೆ ಭಗವಂತನ ಚಿಂತೆಯ ಹೊರತು ಬೇರೆ ಯೋಚನೆ ಬೇಡ. ಬಾಯಿಯಲ್ಲಿ ಉಚ್ಚರಿಸಲು ಸಾಧ್ಯವಿಲ್ಲದಿದ್ದರೆ, ಮನಸ್ಸಿನಲ್ಲಿಯಾದರೂ ಆ ಭಗವಂತನ ನಾಮವನ್ನು ಜಪಿಸು" ಎನ್ನುತ್ತಿರಲು ಮಹಾರಾಣಿಯು ಕೈ ಜೋಡಿಸಿ "**ಜಯ ರಘುವೀರ ಸಮರ್ಥ**" ಎನ್ನುತ್ತಾ ಕಣ್ಣು ಮುಚ್ಚಿದಳು.

ಭರತಖಂಡದ ಸ್ತ್ರೀ ರತ್ನವಾದ, ಅದ್ವಿತೀಯ ಶೌರ್ಯ ಗುಣ ಮಂಡಿತಳಾದ, ಮಹಾರಾಣಿ ಲಕ್ಷ್ಮಿಬಾಯಿಯು, ನಶ್ವರವಾದ ತನ್ನ ದೇಹವನ್ನು ತನ್ನ ದೇಶಕ್ಕಾಗಿ ಈಡಾಡಿ, ಇಹಲೋಕದಲ್ಲಿ ಕೀರ್ತಿಯನ್ನು ಪಡೆದು, ಪರದಲ್ಲಿ ಮುಕ್ತಿಯನ್ನು ಹೊಂದಿದಳು.

---

# ಬೆಳವಡಿ ಮಲ್ಲಮ್ಮ



( ೧೬೭೮ )

ಮಡಿದನೆನುತಳಲುವ ಹೊತ್ತೆ ? ।
ಒಡೆಯನಿಲ್ಲ ದುಳಿವುದೊಳಿತೆ ? ।
ಒಡಲಗಳ್ಳರಿರವು ಕೀಳು ಜಗದಿ ? ।
ಒಡೆಯ ಪಡೆಯ ಕೆಡಹೆ ಪಿಡಿದ ।
ಖಡ್ಗವೆಲ್ಲಿದೆ ? ತನ್ನಿ ಖಡ್ಗವೆಲ್ಲಿದೆ ? ।

—ಮಲ್ಲಾರಿ

ಬೆಳಗಾವ ಜಿಲ್ಹೆಯಲ್ಲಿ **ಬೆಳವಡಿ**ಯೆಂಬ ಸಂಸ್ಥಾನವು ಕರ್ನಾಟಕದಲ್ಲಿ ಅತಿ ಪ್ರಸಿದ್ಧಿಯಾಗಿದ್ದಿತು. ಆ ಸಂಸ್ಥಾನದ ಅರಸು **ಈಶಪ್ರಭು.** ಆತನು ವೀರಶೈವನು. ಆತನ ಪತ್ನಿಯೇ ವೀರರಾಣಿ **ಮಲ್ಲವ್ವೆಯು.** ಈ ದಂಪತಿಗಳು ಶೂರರೂ, ಪ್ರಜಾಪ್ರೇಮಿಗಳೂ, ಧರ್ಮಶೀಲರೂ ಆಗಿದ್ದರು.

ಹೀಗಿರುವಾಗ ಆ ಕಾಲದಲ್ಲಿ ಶಿವಾಜಿ ಮಹಾರಾಜನು ಪುಣೆ, ವಿಜಾಪುರ ಮೊದಲಾದ ಅನೇಕ ರಾಜ್ಯಗಳನ್ನು ಗೆದ್ದು. ಕ್ರಿ. ಶ. ೧೬೭೩ರಲ್ಲಿ ಹುಬ್ಬಳ್ಳಿ ಪಟ್ಟಣವನ್ನು ಸುಲಿದು, ವಿಪುಲವಾದ ದ್ರವ್ಯವನ್ನು ಸಂಪಾದಿಸಿಕೊಂಡು ಬರುವ ಮಾರ್ಗದಲ್ಲಿ, ಬೆಳವಡಿ ಕೋಟೆಗೆ ಮುತ್ತಿಗೆ ಹಾಕಿದನು.

ಆಗ ಈಶಪ್ರಭುವು ಎಳ್ಳಷ್ಟಾದರೂ ಹೆದರದೆ, ಕೋಟೆಯ ಬಾಗಿಲುಗಳನ್ನು ಭದ್ರಪಡಿಸಿ, ಯುದ್ಧಕ್ಕೆ ಸಿದ್ಧನಾದನು. ಆ ಕಾಲಕ್ಕೆ ಶಿವಾಜಿಯ ಸೇನಾಪತಿಯಾದ **ದಾತಾಜಿ ರಘುನಾಥ ಮಹಾಡಕರ** ಎಂಬವನು ಕಪಟತನದಿಂದ ಕೋಟೆಯೊಳಗಿನ ಮನೆಗಳಿಗೆ ಬೆಂಕಿಯನ್ನು ಹಚ್ಚಿಸಿದನು. ಆಗ ಕೋಟೆಯೊಳಗಿನ ದಂಡಾಳುಗಳು ಆ ಬೆಂಕಿಯನ್ನು ನಂದಿಸುವದಕ್ಕೆ

ತೊಡಗಿದರು. ಆ ಸಂಧಿಯನ್ನು ಸಾಧಿಸಿ ಶಿವಾಜಿಯ ಸೈನಿಕರು ಕೋಟೆಗೆ ಲಗ್ಗೆ ಏರಿ ಒಳಗೆ ನುಗ್ಗಿದರು. ಎರಡೂ ಕಡೆಯ ಸೈನಿಕರಿಗೂ ಕಾಳಗ ಪೆಸಗಿತು. ಈ ತುಮುಲಯುದ್ಧದಲ್ಲಿ ಈಶಪ್ರಭುವು ಕುದುರೆಯನ್ನೇರಿ ಬಹಳವಾಗಿ ಹೋರಾಡುತ್ತ ಕೊನೆಗೆ ಮರಣಹೊಂದಿದನು.

ತಮ್ಮ ಒಡೆಯನು ಮಡಿದ ಕೂಡಲೇ ಈಶಪ್ರಭುವಿನ ದಂಡಾಳುಗಳು ಚದರಿದರು. ಕೋಟೆಯು ಮರಾಠರ ಸ್ವಾಧೀನವಾಗುವದೆಂದು ನಮ್ಮ



ಬೆಳವಡಿ ಮಲ್ಲಮ್ಮ

ವೀರಮಾತೆ ಮಲ್ಲವ್ವೆಗೆ ತಿಳಿಯಿತು. ಆವಾಗ್ಯೆ ಆ ವೀರಮಾತೆಯು ಗಂಡು ಮಗನನ್ನು ಹಡದು ಬಹಳ ದಿನಗಳಾಗಿದ್ದಿಲ್ಲ ಮಲ್ಲಮ್ಮನು ಪತಿಯ ಮರಣ ದಿಂದುಂಟಾದ ದುಃಖವನ್ನು ನುಂಗಿಕೊಂಡು, ಕೂಸಿನ ರಕ್ಷಣೆಗಾಗಿ ಶೂರರನ್ನು ಕಾವಲಿಟ್ಟು ಗಂಡುಗಚ್ಚೆ, ಹಾಕಿ ಗಂಡನ ಕುದುರೆಯನ್ನೇರಿ, ದುರ್ಗಾದೇವತೆ

ಯಂತೆ ಬೇಗನೆ ರಣಭೂಮಿಗೆ ಬಂದಳು. ವೀರಾವೇಶದಿಂದ “ ಏಳಿರಿ! ಕನ್ನಡಿಗರೇ, ಏಳಿರಿ! ಕನ್ನಡಿಗರ ಕಲಿತನದ ಕೆಚ್ಚೆದೆಯನ್ನು ಛತ್ರಪತಿಯ ದಂಡಿನವರಿಗೆ ತೋರಿಸಿರಿ!” ಎಂದು ಗರ್ಜಿಸಿದಳು. ಶೂರ ನುಡಿಗಳಿಂದ ಸೈನಿಕರನ್ನು ಹುರಿದುಂಬಿಸಿದಳು. ಮತ್ತೆ ಅವರೊಡನೆ ಕೂಡಿಕೊಂಡು ವೈರಿಗಳನ್ನು ಮುತ್ತಿ, ಅವರನ್ನು ಕೋಟೆಯೊಳಗಿಂದ ಹೊರಗಟ್ಟಿ, ಕೋಟೆಯ ಬಾಗಿಲನ್ನು ಮುಚ್ಚಿಸಿದಳು.

ಮಲ್ಲವ್ವ ದೇಸಾಯಿಣಿಯ ಶೂರ ಹೊಡತಕ್ಕೆ, ತನ್ನವರು ಸೋತು ಬಂದದಕ್ಕೆ, ಶಿವಾಜಿಗೆ ವ್ಯಸನವಾದುದಷ್ಟೇ ಅಲ್ಲ, ಕನ್ನಡವನಿತೆಯರ ಶೌರ್ಯಕ್ಕೆ ಬೆರಗಾದನು. ಈ ಬೆಳವಡಿ ಕೋಟೆಯನ್ನು ಕೈವಶ ಮಾಡಿಕೊಳ್ಳದೆ ಮುಂದಕ್ಕೆ ಹೆಜ್ಜೆ ಇಡುವುದಿಲ್ಲವೆಂದು ಪ್ರತಿಜ್ಞೆಯನ್ನುಮಾಡಿ, ಮತ್ತೆ ಮುತ್ತಿಗೆಯನ್ನು ಸುರುವು ಮಾಡಿದನು. ಮುಂದೆ ಶಿವಾಜಿಗೂ ಮಲ್ಲಮ್ಮನಿಗೂ ೨೭ ದಿವಸಗಳ ವರೆಗೆ ಯುದ್ಧವು ನಡೆಯಿತು. ಮಲ್ಲವ್ವನು ಬಹಳ ಕಲಿತನದಿಂದ ಕಾದಿದಳು. ಹೀಗೆ ಒಳ್ಳೇಭರದಿಂದ ಯುದ್ಧ ನಡೆದಾಗ್ಗೆ ಮಲ್ಲವ್ವನ ಕುದುರೆಯ ಹಿಂದಿನ ಕಾಲನ್ನು ಶಿವಾಜಿಯ ಸೇನಾಪತಿಯು ಕಡಿದನು. ಆಗ ಮಲ್ಲವ್ವನು ಥಟ್ಟನೆ ಕೆಳಗೆ ಹಾರಿ ಯುದ್ಧಮಾಡಲಾರಂಭಿಸಿದಳು. ಈ ಹೋರಾಟದಲ್ಲಿ ಒಬ್ಬ ಮರಾಠ ಸರದಾರನು ಹಿಂದಿನಿಂದ ಬಂದು ಮೋಸದಿಂದ ವೀರರಮಣಿಯಾದ ಮಲ್ಲಮ್ಮನ ಕೈಯನ್ನು ಕಡಿದನು. ಆಗ ನಮ್ಮ ವೀರ ಮಾತೆಯಾದ ಮಲ್ಲಮ್ಮನು ಎಚ್ಚರದಪ್ಪಿ ಬಿದ್ದಳು.

ಅಂಥಾ ಸ್ಥಿತಿಯಲ್ಲಿಯೇ ಆ ಕ್ಷಣವೇ ಶಿವಾಜಿಯ ಸೇನಾಪತಿಯು ಆಕೆಯನ್ನು ಮೇಣೆಯಲ್ಲಿ ಹಾಕಿಕೊಂಡು ಶಿವಾಜಿಯ ಬಳಿಗೊಯ್ದನು. ಹುಡಿಯಲ್ಲಿ ಮುಳುಗಿದ ಮತ್ತು ರಕ್ತದಿಂದ ನೆನೆದ ಆ ವೀರಾಂಗನೆಯನ್ನು ನೋಡಿದ ಕೂಡಲೆ ಶಿವಾಜಿಯ ಮನಸ್ಸು ಕರಗಿತು. ಅವನು ಆಕೆಯ ವಿಷಯವಾಗಿ ಅತ್ಯಂತ ಪೂಜ್ಯಭಾವವನ್ನು ತಾಳಿ ಆ ಮಹಾತಾಯಿಯು ಎಚ್ಚತ್ತನಂತರ ಆ ಮಹನೀಯಳನ್ನು ಕುರಿತು:— ಮಹಾತಾಯಿ! ನೀವು ನನ್ನ ಶತ್ರುಗಳಾಗಿದ್ದರೂ ನಿಮ್ಮ ಹೆಣ್ಣೆದೆಯ ಶೂರತನವನ್ನೂ, ಧೈರ್ಯವನ್ನೂ, ಸ್ವದೇಶಾಭಿಮಾನವನ್ನೂ, ನೋಡಿ ನಾನು ಅತಿಶಯ ಆಶ್ಚರ್ಯ

ಭರಿತನಾಗಿದ್ದೇನೆ. ಎಂದು ಬಹಳ ರೀತಿಯಿಂದ ಹೊಗಳಿ ಆಕೆಗೆ ಕೆಲವು ಹಳ್ಳಿಗಳನ್ನು ಉಂಬಳಿಯಾಗಿ ಬಿಟ್ಟು, ಉಡುಗರೆಕೊಟ್ಟು ಯೋಗ್ಯ ಮರ್ಯಾದೆಯಿಂದ ಬಂಧು ಭಾವದಿಂದ ನಡೆದುಕೊಳ್ಳುವಂತೆ ಹೇಳಿ, ಬೀಳವಡಿಗೆ ಕಳುಹಿಸಿಕೊಟ್ಟನು.

ಮಲ್ಲಮಾಂಬೆಯು ಶಿವಾಜಿಯ ಔದಾರ್ಯಕ್ಕೂ ಬಂಧು ಪ್ರೇಮಕ್ಕೂ ಮೆಚ್ಚಿ, ಆತನಿಗೆ ರಾಜಮನ್ನಣೆಯನ್ನು ಮಾಡಿದಳು. ಮುಂದೆ ಕೆಲವು ದಿವಸ ಮಲ್ಲಮ್ಮನು ರಾಜ್ಯಭಾರವನ್ನು ನಡೆಸಿದಳು. ಆ ಸಮಯದಲ್ಲಿ ಅನೇಕ ದೇವಸ್ಥಾನಗಳನ್ನು ಕಟ್ಟಿಸಿದಳು. ಗುಡಿ ಗುಂಡಾರಗಳನ್ನು ಪುನರುಜ್ಜೀವನಗೊಳಿಸಿದಳು. ದಾರಿದಾರಿಗಳಲ್ಲಿ ಅನ್ನಛತ್ರ ಅರವಟ್ಟಿಗೆಗಳನ್ನು ಇಡಿಸಿದಳು. ರಾಜಕೀಯ ಮತ್ತು ಧಾರ್ಮಿಕ ಪ್ರಸಂಗಗಳಲ್ಲಿ ಆ ವೀರ ಮಾತೆಯು ಪುರುಷರಂತೆ ಆಚರಿಸಿ ಕೀರ್ತಿಶಾಲಿಯಾಗಿ ವಿರಾಜಿಸಿದಳು.

---

# ಕೆಳದಿ ಚನ್ನಮ್ಮಾಜಿ

( ೧೬೭೭ )

-+-

**ರಾಣಿ ಚನ್ನಮ್ಮಾಜಿಯು** ಮೈಸೂರ ನಾಡಿನ ಕೆಳದಿ ಸಂಸ್ಥಾನದ ಹತ್ತಿರವಿರುವ ಕೊಟ್ಟಿಪುರದ ಸಿದ್ದಪ್ಪಶೆಟ್ಟರ ಮಗಳು ಕೆಳದಿ ಸಂಸ್ಥಾನದ **ಸೋಮಶೇಖರ ರಾಜನು** ಸನ್ ೧೬೬೩ರಲ್ಲಿ ಅತಿ ಸಂಭ್ರಮದಿಂದ ಈಕೆಯನ್ನು ಮದುವೆಯಾದನು ಸೋಮಶೇಖರ ರಾಜನು ಕೆಲವು ವರ್ಷ ರಾಜ್ಯವಾಳುತ್ತಿರಲು, ಕ್ಷುಲ್ಲಕರ ಸೆಳವಿಗೆ ಸಿಲುಕಿ ವ್ಯಸನಾಸಕ್ತನಾದನು. ಈ ಸಂಧಿಯನ್ನು ಸಾಧಿಸಿ ಕುಹಕಿಗಳು ಆತನಿಗೆ ದ್ರೋಹವನ್ನು ಬಗೆದರು. ವಿಜಾಪುರದಿಂದ ದಂಡನ್ನು ಬರಸಿದರು. ಈ ದಂಡಿಗೆ ನಾಯಕನಾದ ಜನ್ನೋಪಂತನು ಖಳರ ಕುತಂತ್ರಕ್ಕೆ ಕಿವಿಸೋತು, ಸೋಮಶೇಖರರಾಜನನ್ನು ಕೊಲ್ಲಿಸಿದನು.

ಆಗ ಕೆಳದಿಯ ಸಂಸ್ಥಾನವು ಗಂಡಾಂತರಕ್ಕೆ ಗುರಿಯಾಯಿತು. ರಾಜಕೀಯ ವಾತಾವರಣವು ಅತಿ ವಿಷಮವಾಯಿತು ದ್ರೋಹ, ಒಳಸಂಚುಗಳ ಹಾವಳಿಯು ಹೆಚ್ಚಾಯಿತು. ಸಾಲದುದಕ್ಕೆ ಹೊರ ಹಗೆಯು ಒಳಹೊಕ್ಕು ಎದೆಯ ಮೇಲೆ ನಿಂತಿದ್ದಾನೆ.! ಎಂತಹರನ್ನು ಎದೆಗೆಡಿಸುವಂಥ ಪ್ರಸಂಗ! ಅಂಥಾದ್ದರಲ್ಲಿ ಧೈರ್ಯಶಾಲಿನಿಯಾದ ಚನ್ನಮ್ಮಾಜಿಯು, ಆ ಸಮಯದಲ್ಲಿ ಬಹಳ ಜಾಣತನದಿಂದ ವರ್ತಿಸಿದಳು. ಘೋರವಾದ ಈ ವಿಪತ್ತಿನಲ್ಲಿ ಈಕೆಯು ಹತಾಶಳಾಗಲಿಲ್ಲ. ದಾರುಣವಾದ ಪತಿಯ ಮರಣದ ದುಃಖವನ್ನು ನುಂಗಿಕೊಂಡು, ತನ್ನ ರಾಷ್ಟ್ರದ ಹಿತಚಿಂತನೆಗೆ ಮುಂದುವರಿದಳು.

ಆಗ ಚನ್ನಮ್ಮಾಜಿ ಇನ್ನೂ ತರಳೆ. ಆದರೂ ರಾಜನೀತಿಯ ರಹಸ್ಯವನ್ನು ಚನ್ನಾಗಿ ಅರಿತುಕೊಂಡಿದ್ದಳು. ಅನ್ಯಾಯವಾಗಿ ತನ್ನ ಪತಿಯನ್ನು ಘಾತಿಸಿದ ಜನ್ನೋಪಂತನನ್ನು ಸದೆಬಡೆದು ಸೇಡನ್ನು ತೀರಿಸಿಕೊಂಡಳು. ಚನ್ನಮ್ಮಾಜಿಯ ಈ ಚಟುವಟಿಕೆಗಳನ್ನು ಕಂಡು, ರೊಚ್ಚಿಗೆದ್ದ ಕುಹಕಿಗಳು ಬೇರೊಂದು

ತಂತ್ರವನ್ನು ಹೂಡಿದರು. ಅವರು ಚನ್ನಮ್ಮಾಜಿಯ ಕೈಯ್ಯಲ್ಲಿ ಆಡಳಿತವು ಇರದಂತೆ ಯೋಚಿಸಿದರು. ಬೇರೊಬ್ಬ ಅರಮನೆಯ ಸಂಬಂಧಿಕನನ್ನು ಈಕೆಗೆ ಪ್ರತಿಸ್ಪರ್ಧಿಯಾಗಿ ಮುಂದೆ ಚಾಚಿ ಆಟವನ್ನು ಹೂಡಿದರು. ಚತುರೆಯಾದ ಚನ್ನಮ್ಮಾಜಿಯು ಬಹು ಜಾಣ್ಮೆಯಿಂದ ಈ ಕುಚೋದ್ಯಗಳನ್ನೆಲ್ಲಾ ಹೊಡೆದುಹಾಕಿದಳು. ಆಗ ರಾಜಕೀಯರೆಲ್ಲರು ಏಕಮತವಾಗಿ ಚನ್ನಮ್ಮಾಜಿಯು ರಾಜ್ಯಕ್ಕೆ ಅರ್ಹಳೆಂದು ನಿರ್ಧರಿಸಿ ಸನ್ ೧೬೭೭ರಲ್ಲಿ ಈಕೆಗೆ ಪಟ್ಟಗಟ್ಟಿದರು.

ತರುವಾಯ ಚನ್ನಮ್ಮಾಜಿಯು **ಬಸಪ್ಪನಾಯಕ**ನನ್ನು ದತ್ತಪುತ್ರನಾಗಿ ಮಾಡಿಕೊಂಡು ಒಳ್ಳೇ ವೈಭವದಿಂದ ರಾಜ್ಯಭಾರವನ್ನು ನಡೆಸಿದಳು. ಹೀಗಿರುತ್ತಿರುವಾಗ ನಡುವೆ ಒಮ್ಮೆ ಶಿವಾಜಿಯ ಎರಡನೆಯ ಮಗನಾದ ರಾಜಾರಾಮನು, ಮೊಗಲರ ಆಘಾತಕ್ಕೆ ತತ್ತರಿಸಿ ಹಗೆಯನ್ನು ತಪ್ಪಿಸಿ, ಕರ್ನಾಟಕಕ್ಕೆ ಓಡಿಬಂದು ಕೆಳದಿಯ ರಾಣಿಯಾದ ಈ ಚನ್ನಮ್ಮಾಜಿಯನ್ನು ಕಾಪಾಡು ಎಂದು ಮೊರೆ ಹೊಕ್ಕನು. "ಮೊಗಲರಿಗೆ ತಿಳಿಯದಂತೆ ನನ್ನನ್ನು ನಿಮ್ಮ ನಾಡಿನಿಂದ ದಾಟಿಸಿ ಚಂದಿಯುಗಡಕ್ಕೆ ನನ್ನನ್ನು ತಲುಪಿಸಿರಿ" ಯೆಂದು ಬೇಡಿಕೊಂಡನು. ಕರುಣಾನಿಧಿಯಾದ ಚನ್ನಮ್ಮಾಜಿಯು "ಆಪತ್ತೆಂಬುದು ಎಂತಹರಿಗೂ ಬರುವುದುಂಟು, ದೊಡ್ಡವರು ಕಷ್ಟದಲ್ಲಿ ಇದ್ದರೂ ಅವರು ಮಾನಾರ್ಹರೇ"ಯೆಂದು ಯೋಚಿಸಿ ಆತನಿಗೆ ಅಭಯವಿತ್ತು ತನ್ನ ರಾಜ್ಯದಲ್ಲಿ ಇಟ್ಟುಕೊಂಡಳು.

ಈ ವರ್ತಮಾನವು ಔರಂಗಜೇಬ ಬಾದಶಹನಿಗೆ ತಿಳಿದೊಡನೆ ಆತನು ಕೆರಳಿ ಕೆಂಡವಾದನು. ತನ್ನ ಸೇನಾನಿಯಾದ ರಣಮಸ್ತಖಾನನಿಗೆ ರಾಜಾರಾಮನನ್ನು ರಭಸದಿಂದ ಹಿಡಿತರಲು ಅಪ್ಪಣೆಯಿತ್ತನು. ಖಾನನು ಕೆಳದಿಯ ಸಂಸ್ಥಾನಕ್ಕೆ ಬಂದು ಆ ರಾಜ್ಯದಲ್ಲಿ ಆಶ್ರಯ ಪಡೆದ ನಮ್ಮ ಹಗೆಯನ್ನು ಬೇಗ ನಮಗೆ ಒಪ್ಪಿಸಬೇಕು, ಇಲ್ಲವಾದರೆ ಬಲು ಜೋಕೆ! ಬಾದಶಹನ ಕ್ರೋಧಾಗ್ನಿಗೆ ಆಹುತಿಯಾಗಿ ಸುಮ್ಮನೆ ಹಾಳಾದೀರಿ! ಎಂದು ತಿಳುಹಿದನು. ಮಂತ್ರಿ ಬೊಮ್ಮಯ್ಯ ಬೊಕ್ಕಸದ ಸಿದ್ಧಬಸವಯ್ಯ ಮುಂತಾದ ಅರಮನೆಯ ಸಾಮಾಜಿಕರೊಡನೆ ಚನ್ನಮ್ಮಾಜಿಯು ಈ ವಿಷಯವನ್ನು ಆಲೋಚಿಸಿದಳು. ಕೊನೆಗೆ ಬಂದುದು ಬರಲಿ, ಔರಂಗಜೇಬನು ಮುನಿದು ಬಂದು ನಮ್ಮ

ಸಂಸ್ಥಾನವನ್ನು ತೆಗೆದುಕೊಳ್ಳಲಿ, ಆದರೆ ಮೊರೆಹೊಕ್ಕವನನ್ನು ಹಗೆಗೆ ಒಪ್ಪಿಸುವದು ರಾಜ ಧರ್ಮವಲ್ಲವೆಂದು ರಾಣಿಯು ನಿರ್ಣಯಿಸಿದಳು. ರಾಜಾರಾಮನಿಗೆ ವೇಷಾಂತರವಮಾಡಿಸಿ ಕಾವಲು ದಳದೊಂದಿಗೆ ಗುಟ್ಟಾಗಿ ಆತನನ್ನು ಚಂದಿಯ ಗಡಕ್ಕೆ ತಲುಪಿಸಿದಳು. "ರಾಜಾರಾಮನೇನೊ ನಮ್ಮ ಸೀಮೆಯ ಬಳಿಯಿಂದ ಹಾಯ್ದು ಹೋದುದು ನಿಜ. ಆದರೆ ಆತನು ನಮ್ಮ ರಾಜ್ಯದಲ್ಲಿ ಇಲ್ಲ!" ಎಂದು ರಾಣಿಯು ಖಾನನಿಗೆ ಅರುಹಿದಳು.

ಈ ಮಾತನ್ನು ಖಾನನು ಔರಂಗಜೇಬನಿಗೆ ತಿಳಿಸಲು ಅವನು ಮತ್ತಿಷ್ಟು ರೇಗಿ, ಕೆಳದಿಯ ರಾಜ್ಯವನ್ನು ಧ್ವಂಸಮಾಡಿರಿ ಯೆಂದು ಆಜ್ಞಾಪಿಸಿ, ತನ್ನ ಮಗನಾದ ಅಜಿಮತಾರನನ್ನು ಎಣಿಕೆಯಿಲ್ಲದ ದಂಡಿನೊಡನೆ ಕಳುಹಿಸಿ ಕೊಟ್ಟನು. ಆ ಸೇನೆಯು ಬಂದು ಕೆಳದಿ ರಾಜ್ಯದಲ್ಲಿ ನುಗ್ಗಿತು. ಇದರಿಂದ ಚನ್ನಮ್ಮಾಜಿಯು ಎದೆಗುಂದಲಿಲ್ಲ. ಆಕೆಯು ಅತಿ ಸಾಹಸವನ್ನು ತಳೆದು ಎದುರಿಸಲು ದೊಡ್ಡದಾದ ದಂಡನ್ನು ಅಟ್ಟಿದಳು. ಬಿದರೂರಲ್ಲಿ ಅತಿ ಭೀಕರವಾದ ಕದನವು ನಡೆಯಿತು. ಕೆಳದಿಯ ಭಟರು ಬಹಳ ಶೌರ್ಯವನ್ನು ತೋರಿಸಿದರು. ಮೊಗಲ ಸಿಪಾಯಿಗಳ ಮೇಲೆ ಮುಗಿಬಿದ್ದು ತುಂಡು ತುಂಡು ಮಾಡಿದರು. ರಣರಂಗವನ್ನು ಬರಿಗೈದರು. ಬಳಿಕ ರಾಣಿಯೊಡನೆ ಸಂಧಾನವಾಗಿ ಮೊಗಲ ಸೇನೆಯು ಹಿಂದಿರುಗಿತು. ಮುಂದೆ ಕೆಳದಿ ಸಂಸ್ಥಾನವು ಚನ್ನಮ್ಮಾಜಿಯು ಪರಿಪಾಲನೆಯಲ್ಲಿ ಸುರಕ್ಷಿತವಾಗಿ ಬಾಳಿತು ಆಕೆಯ ಪರಾಕ್ರಮ, ರಾಜನೀತಿ ಚಾತುರ್ಯ ಇವುಗಳ ಕೀರ್ತಿ ಎಲ್ಲೆಲ್ಲಿಯೂ ಹರಡಿತು.

ಚನ್ನಮ್ಮಾಜಿಯ ಯೋಗ್ಯತೆಯು ಘನವಾದುದು. ಆಕೆಯು ಸಂಗ್ರಾಮ ಕಾರ್ಯಗಳಲ್ಲದೆ ಪ್ರಜಾಹಿತದ ಅನೇಕ ಕಾರ್ಯಗಳನ್ನೂ, ಧರ್ಮಕಾರ್ಯಗಳನ್ನೂ ನೆರವೇರಿಸಿದಳು. ತನ್ನ ಗಂಡನ ನೆನವರಿಕೆಗಾಗಿ ಅಗ್ರಹಾರಗಳನ್ನು ಸ್ಥಾಪಿಸಿದಳು. ದೇವರ ಗುಡಿಗಳನ್ನು ಭದ್ರಗೊಳಿಸಿದಳು. ಉತ್ಸವಗಳನ್ನು ಸಾಂಗಗೊಳಿಸಿದಳು ಮಠಗಳನ್ನು ಕಟ್ಟಿಸಿದಳು. ಜಾತಿ ಮತಭೇದವನ್ನು ಎಣಿಸದೆ ನಾನಾವಿಧವಾದ ಶಾಶ್ವತ ದಾನಗಳನ್ನು ನೀಡಿದಳು. ಈ ಪರಿಯಿಂದ ಕೀರ್ತಿಶೇಷಳಾಗಿ ೧೬೯೬ರಲ್ಲಿ ಶಿವಾಧೀನಳಾದಳು.

---

# ಕಿತ್ತೂರ ಚನ್ನಮ್ಮ

## ( ೧೮೨೪ )



ಚಂಡಿಯೊ ? ಚೌಡಿಯೊ ? ಮಾರಿಯೊ ? ಮಷಣಿಯೊ ?
ಖಂಡಿತ ಮಾನಿನಿ ಇವಳಲ್ಲ, ಗಂಡುಗಲಿಗಳ ಮೀರಿ,
ರುಂಡವ ತರಿವಳು ಮಹಾಮಾಯಿ ಯಲ್ಲದೆ ಬ್ಯಾರಲ್ಲ,
ಪುಂಡ ರಕ್ಕಸರ ಹಿಂಡು ಮುರಿದ ಚಾಮುಂಡಿ ಈಕೆ
ಖಂಡಿತ ಸುಳ್ಳಲ್ಲ, ಚಂಡ ಪ್ರಚಂಡ ನಿನಾದ ರಣವೆಲ್ಲ,

**ಚನ್ನಮ್ಮನ ಲಾವಣಿ**

ಕನ್ನಡಿಗರಲ್ಲಿ ಐತಿಹಾಸಿಕ ವೀರಪುರುಷರು ನಮಗೆ ದೊರೆಯುವಂತೆ, ಕನ್ನಡ ವೀರಮಾತೆಯರೂ ನಮಗೆ ದೊರೆಯುತ್ತಾರೆ ಅವರೊಳಗೆ ವೀರ ಮಾತೆ **ಕಿತ್ತೂರ ಚನ್ನಮ್ಮನು** ಒಬ್ಬಳು

ಬೆಳಗಾವಿ ಜಿಲ್ಹೆಗೆ ಸೇರಿದ ಕಿತ್ತೂರೆಂಬ ಸಂಸ್ಥಾನವನ್ನು ಸುಪ್ರಸಿದ್ಧನಾದ **ಮಲಸರ್ಜ**ನೆಂಬ ವೀರಶೈವ ಮತದ ಅರಸನು ಆಳುತ್ತಿದ್ದನು. ಆತನಿಗೆ **ರುದ್ರಮ್ಮ** ಮತ್ತು **ಚನ್ನಮ್ಮ** ಎಂಬ ಇಬ್ಬರು ಧರ್ಮಪತ್ನಿಯರಿದ್ದರು ರುದ್ರಮ್ಮ ತಲ್ಲೂರ ದೇಸಾಯರ ಮಗಳು ಚನ್ನಮ್ಮ ಕಾಗತಿ ದೇಸಾಯರ ಮಗಳು. ಚನ್ನಮ್ಮನು ಚಲುವೆಯೂ, ಚದುರೆಯೂ ಇದ್ದಳು. ಆದರೆ ಮಕ್ಕಳಿರಲಿಲ್ಲ. ರುದ್ರಮ್ಮನಿಗೆ ಮೂವರು ಗಂಡುಮಕ್ಕಳು. ಕ್ರಿ. ಶ ೧೮೧೬ರಲ್ಲಿ ಮಲಸರ್ಜನು ೩೪ ವರ್ಷ ಉತ್ತಮ ರೀತಿಯಿಂದ ರಾಜ್ಯವಾಳಿ ಮರಣ ಹೊಂದಿದನು. ಆವನ ತರುವಾಯ ಅವನ ಮಗನಾದ **ಶಿವಲಿಂಗರುದ್ರ ಸರ್ಜನು** ಪಟ್ಟಕ್ಕೆ ಕುಳಿತನು. ಆದರೆ ಆತನು ಬಹುಕಾಲ ರಾಜ್ಯವಾಳಲಿಲ್ಲ. ಏಳೆಂಟು ವರ್ಷ ರಾಜ್ಯವಾಳಿ ಕ್ಷಯರೋಗದಿಂದ ಮರಣ ಹೊಂದಿದನು. ಆತನ ತಮ್ಮಂದಿರು ಆ ಮುಂಚೆಯೇ ತೀರಿಕೊಂಡಿದ್ದರು.

ಆದುದರಿಂದ ದರಬಾರಿನವರೆಲ್ಲರೂ ಸೇರಿ ಆ ಸಂಸ್ಥಾನಕ್ಕೆ ಒಬ್ಬ ದತ್ತಕ ಮಗನನ್ನು ಮಾಡಿದರು. ಆ ಮಗನ ಹೆಸರಿನಿಂದ ಚನ್ನಮ್ಮ ರಾಣಿಯು

ರಾಜ್ಯಭಾರವನ್ನು ಸಾಗಿಸಿದಳು. ಈ ಸುದ್ದಿಯು ಕಂಪನಿ ಸರಕಾರಕ್ಕೆ ತಿಳಿಯಿತು. ಆಗ ಧಾರವಾಡದ **ಪೊಲಿಟಿಕಲ್ ಏಜಂಟನಾದ ಥ್ಯಾಕರೆ ಸಾಹೇಬನು** ಕಿತ್ತೂರ ಸಂಸ್ಥಾನದ ಕಾರಭಾರವನ್ನೂ, ಬೊಕ್ಕಸದ ಸ್ಥಿತಿಗತಿಯನ್ನು ನೋಡುವದಕ್ಕೋಸ್ಕರ ಬರುತ್ತೇನೆಂದು ಹೇಳಿ ಕಳುಹಿಸಿದನು. ಆದರೆ ಮಹಾ ತೇಜಸ್ವಿನಿಯೂ, ಶೂರಳೂ ಆದ ಕೆಚ್ಚೆದೆಯ ಚನ್ನಮ್ಮನಿಗೆ ಈ ಮಾತು ಸಹನವಾಗಲಿಲ್ಲ. “ನಮ್ಮ ಸಂಸ್ಥಾನದಲ್ಲಿ ಕೈ ಹಾಕುವದಕ್ಕೆ ನೀನು ಯಾರು ?” ಯೆಂದು ನುಡಿದು, ತನ್ನ ಕೋಟೆಯನ್ನು ಭದ್ರಪಡಿಸಿ ಯುದ್ಧದ ಸಿದ್ಧತೆಯನ್ನು ಮಾಡಿದಳು.



**ಕಿತ್ತೂರ ಚನ್ನಮ್ಮ**

ಚನ್ನಮ್ಮನ ಯುದ್ಧ ಸನ್ನಾಹದ ಸಮಾಚಾರವು ಇಂಗ್ಲೀಷರಿಗೆ ತಿಳಿಯಿತು. ಥ್ಯಾಕರೆ ಸಾಹೇಬನು ಸೈನ್ಯವನ್ನು ತೆಗೆದುಕೊಂಡು ಬಂದು ಕಿತ್ತೂರ ಕೋಟೆಗೆ ಮುತ್ತಿಗೆ ಹಾಕಿದನು. ಆ ದಳದವರಿಗೂ ಕಿತ್ತೂರವರಿಗೂ ಕೈಕೈಯಾಯಿತು. ಕೆಲ ದಿನಗಳವರೆಗೆ ಕಾದಾಟವು ನಡೆಯಿತು. ಕಿತ್ತೂರ ಕಲಿಗಳು ಹಗೆಗಳನ್ನು ಸೋಲಿಸಿ ಹಿಮ್ಮೆಟ್ಟಿಸಿದರು. ಈ ಸಂದರ್ಭದಲ್ಲಿ

ಕಿತ್ತೂರ ಕಲಿಗಳು ಕೆಲವು ಆಂಗ್ಲಬಾಲಕರನ್ನೂ ಥ್ಯಾಕರೆ ಸಾಹೇಬನ ಮಕ್ಕಳನ್ನೂ ಸೆರೆ ಹಿಡಿದುಕೊಂಡು ಹೋಗಿ ಚನ್ನಮ್ಮನಿಗೆ ಒಪ್ಪಿಸಿದರು. ಎಳೆಯ ಕೂಸುಗಳನ್ನು ಸೆರೆ ಹಿಡಿದುತಂದ ತನ್ನ ಸೈನಿಕರ ಶೌರ್ಯವನ್ನು ಆಕೆ ಧಿಃಕರಿಸಿದಳು. ಕನ್ನಡ ಅರಿಯದ ಆ ಮಕ್ಕಳನ್ನು ಚನ್ನಮ್ಮನು ಬಹಳವಾಗಿ ಪ್ರೀತಿಸಿ, ಅವರನ್ನು ಕರೆದುಕೊಂಡು ಹೋಗಲು ಇಂಗ್ಲೀಷರಿಗೆ ತಿಳಿಸಿದಳು.

ಚನ್ನಮ್ಮನ ಉದಾತ್ತವಾದ ಈ ಆಚರಣೆಯಿಂದ ಥ್ಯಾಕರೆ ಸಾಹೇಬನಲ್ಲಿ ಆಕೆಯ ಬಗ್ಗೆ ಆದರವು ಹುಟ್ಟಿತು. ಆತನು ಆಕೆಯೊಡನೆ ಸ್ನೇಹ ಒಡಂಬಡಿಕೆಯನ್ನು ಸೂಚಿಸಿದನು ಕದನವು ಬೇಡ. ಹನ್ನೊಂದು ಊರುಗಳನ್ನು ತೆಗೆದುಕೊಂಡು ದೇಸಗತಿಯನ್ನು ಬಿಟ್ಟುಕೊಡುವದಾಗಿ ಕೇಳಿಸಿದನು. ಗೌರವ ಹೀನವಾದ ಇಂತಹ ಮಾತುಗಳನ್ನು ಅಭಿಮಾನಿಯಾದ ಚನ್ನಮ್ಮನು ಒಪ್ಪುವಳೆ ? ಒಪ್ಪಲಿಲ್ಲ. ಕೊನೆಗೆ ಥ್ಯಾಕರೆ ಸಾಹೇಬನು ತಾನೇ ಶಾಂತಿಯ ಬಿಳಿ ಪತಾಕೆಯನ್ನು ಎತ್ತಿಕೊಂಡು ಮಿತ ಪರಿವಾರದೊಡನೆ ಸಂಧಾನಕ್ಕಾಗಿ ಕಿತ್ತೂರಿಗೆ ಬಂದನು. ಆ ಸಂದರ್ಭದಲ್ಲಿ ಆತನನ್ನು ನೋಡಿ ಅಮಟೂರ ಬಾಳಪ್ಪನೆಂಬ ಕೊತ್ತಳದ ಮೇಲಿನ ಕಾವಲುಗಾರನು ಅವಿವೇಕದಿಂದ ಗುಂಡನ್ನು ಹಾರಿಸಿದನು. ಇದರಿಂದ ಥ್ಯಾಕರೆ ಸಾಹೇಬನು ಗತ ಪ್ರಾಣನಾದನು. ಈ ಸುದ್ದಿಯು ಹಾಂ ಹಾಂ ಎನ್ನುವಷ್ಟರಲ್ಲಿ ಎಲ್ಲೆಲ್ಲಿಯೂ ಹಬ್ಬಿತು. ಇಂಗ್ಲೀಷರ ಬೀಡಿನಲ್ಲಿ ಕೋಲಾಹಲವು ಎದ್ದಿತು.

ನಡೆದುಹೋದ ಅಚಾತುರ್ಯಕ್ಕಾಗಿ ಚನ್ನಮ್ಮನು ಮರುಗಿದಳು. ಆದರೆ ಇಂಗ್ಲೀಷರ ಸಿಂಹಗರ್ಜನೆಯು ಆಕೆಯನ್ನು ಹೆದರಿಸಲಿಲ್ಲ. ಎದೆಯನ್ನು ಕದಲಿಸಲಿಲ್ಲ. ಗಂಡು ಗೆಡಿಸಲಿಲ್ಲ. ಧಾರವಾಡದ ಇಂಗ್ಲೀಷರ ದಂಡಾಳುಗಳು ಆ ವೇಶದಿಂದ ಬಂದು ಕಿತ್ತೂರನ್ನು ಮುತ್ತಿದರು. ಕೆಚ್ಚೆದೆಯ ಚನ್ನಮ್ಮನು ವೀರಗಚ್ಚೆಯನ್ನು ಹಾಕಿ, ಕೈಯಲ್ಲಿ ಖಡ್ಗವನ್ನು ಹಿಡಿದು ಕುದುರೆಯನ್ನೇರಿ ರಣರಂಗದಲ್ಲಿ ಬಂದು ಧುಮುಕಿದಳು. ರಭಸದಿಂದ ಕಾಳಗವು ಮುಂದು ವರಿಯಿತು. ಎರಡು ಬಲದ ದಳಗಳು ಫಿರಂಗಿಯ ಬೆಂಕಿಯ ಮಳೆಗಳನ್ನು ಕರದವು.

ಕೆಲಕಾಲದ ವರೆಗೆ ಕಿತ್ತೂರ ದಳದ ಆರ್ಭಟವು ಮಿಗಿಲಾಯಿತು. ಕಿತ್ತೂರ ಕಡುಗಲಿಗಳ ಮುಂದೆ ನುರಿತ ಇಂಗ್ಲೀಷ ದಂಡಾಳುಗಳ ಆಟವು ಸಾಗಲಿಲ್ಲ. ಚನ್ನಮ್ಮನ ಕಟ್ಟಾಳುಗಳ ಏಟುಗಳನ್ನು ತಾಳಲಾರದೆ ಇಂಗ್ಲೀಷ ಸೈನಿಕರು ಸೋತು ಓಡಲಾರಂಭಿಸಿದರು.

ಚನ್ನಮ್ಮನ ಯುದ್ಧರೀತಿಯೂ ಸಾಹಸ ಶಕ್ತಿಯೂ ಲೋಕವನ್ನು ಅಚ್ಚರಿಗೊಳಿಸಿದವು ಕಿತ್ತೂರ ಹೆಂಗಳೆಯೊಬ್ಬಳ ಕೈಗೆ ಸಿಕ್ಕು ಇಂಗ್ಲೀಷ ಸೇನೆಯು ಬವಣೆಗೊಂಡ ಸಮಾಚಾರವನ್ನು ಕೇಳಿದೊಡನೆ ದಕ್ಷಿಣಭಾಗದ ಕಮಿಶನರನಾಗಿದ್ದ **ಚಾಪಲೆನ್ ಸಾಹೇಬನು** ದೊಡ್ಡದಾದ ದಂಡನ್ನು ತೆಗೆದುಕೊಂಡು ಬಂದು ೧೮೨೪ನೆ, ನವಂಬರ ೩೦ರಲ್ಲಿ ಮುತ್ತಿಗೆ ಹಾಕಿದನು.

ಮೊದಲಿಗಿಂತಲೂ ಇಮ್ಮಡಿಯಾಗಿ ಯುದ್ಧವು ಜರುಗಿತು. ಮದ್ದಿನ ಹೊಗೆಯೂ ಗುಂಡಿನ ಉರಿಯೂ ಕಿತ್ತೂರ ಕೋಟೆಯನ್ನು ಮುಸುಗಿದವು. ಈ ಸಂದರ್ಭದಲ್ಲಿ ಕೋಟೆಯಲ್ಲಿ ಒಳಸಂಚಿನ ಉರಿಯೊಂದು ಎದ್ದಿತು. ಇಂತಹ ವಿಷಮ ಕಾಲದಲ್ಲಿಯೂ ಚನ್ನಮ್ಮನು ಧೈರ್ಯಗೆಡಲಿಲ್ಲ, ಆಕೆಯು ಮೂರು ದಿನಗಳ ವರೆಗೆ ಆಂಗ್ಲರ ಕೂಡ ಬಡಿದಾಡಿದಳು. ವಿಶ್ವಾಸಘಾತವಾಗಿ ಮದ್ದಿನಲ್ಲಿ ಬೆರಕೆಯಾಯಿತು, ಫಿರಂಗಿಗಳ ಕೆಲಸವು ನಿಂತು ಹೋಯಿತು. ಇಂಗ್ಲೀಷರ ಗುಂಡುಗಳ ಅಬ್ಬರವು ಹಿರಿದಾಯಿತು. ಅವುಗಳ ಹೊಡೆತದಿಂದ ಕೋಟೆಯ ಗೋಡೆಯು ಸಡಿಲಿತು. ಚನ್ನಮ್ಮನ ಸಾಹಸವೆಲ್ಲವು ವಿಫಲವಾಯಿತು. ಕೊನೆಯಲ್ಲಿ ಇಂಗ್ಲೀಷರು ಜಯಶಾಲಿಗಳಾದರು.

ಎಷ್ಟು ಹೋರಾಡಿದರೂ ಆಗಬಾರದೆಂದು ನೆನೆದುದು ಆಗಿಯೇ ಹೋಯಿತು. ತನ್ನ ನಾಡಿಗೆ ಒದಗಿದ ಈ ದುಸ್ಥಿತಿಯನ್ನೂ, ತನ್ನ ಪ್ರೀತಿಯ ಕಿತ್ತೂರು ಹಾಳಾದುದನ್ನೂ ನೋಡಿ, ಮಾನವಂತಳಾದ ಚನ್ನಮ್ಮನು ಬಾಳುವದೆಂತು ? ಆಕೆಯು ವೈರಿಗಳ ಕೈಯಿಂದ ತಪ್ಪಿಸಿಕೊಂಡು ಕಿತ್ತೂರನ್ನು ಬಿಟ್ಟು ತೆರಳಿದಳು. ಹೊಂಗಲ ಕೋಟೆಯನ್ನು ಆಶ್ರಯಿಸಬೇಕೆಂದು ಹೊರಟು ದಾರಿಯಲ್ಲಿ ಮಲಾಪಹಾರಿ ಹೊಳೆಯಲ್ಲಿ ಹಾರಿಕೊಂಡಳು. ನಶ್ವರವಾದ ಆಕೆಯ ಶರೀರವು ಪಂಚಮಹಾ ಭೂತಗಳಲ್ಲಿ ಬೆರೆತು ಹೋಯಿತು. ಅಮರವಾದ ಆಕೆಯ ಆತ್ಮವು ವಿಶ್ವದ ಅನಂತದಲ್ಲಿ ಲೀನವಾಯಿತು.

---

# ನರಗುಂದ ಸಾವಿತ್ರಿಬಾಯಿ



ಸನ್ ೧೮೫೮ರ ಸುಮಾರಕ್ಕೆ ಧಾರವಾಡ ಜಿಲ್ಹೆಗೆ ಸೇರಿದ ನರಗುಂದ ದಲ್ಲಿ ಬಂಡಾಯವೆದ್ದಿತು. ಪೊಲಿಟಿಕಲ್ ಏಜಂಟನಾದ **ವ್ಯಾನಸನ ಸಾಹೇಬನ** ಕೊಲೆಮಾಡಿದ ಆರೋಪವು ನರಗುಂದ ಸಂಸ್ಥಾನಿಕನಾದ **ಬಾಬಾ ಸಾಹೇಬನ** ಮೇಲೆ ಬಂದಿತು. ಬಾಬಾಸಾಹೇಬನಿಗೆ ಮಕ್ಕಳಿರಲಿಲ್ಲ. ದತ್ತಕ ತೆಗೆದುಕೊಳ್ಳಲು ಇಂಗ್ಲೀಷರು ಅಪ್ಪಣೆ ಕೊಡಲಿಲ್ಲ. ಇದರಿಂದ ಬಾಬಾ ಸಾಹೇಬನು ಸಿಟ್ಟಾದನು. ವ್ಯಾನಸನ್ ಸಾಹೇಬನು ಕೋಟೆಮೇಲಿರುವ ಮದ್ದು ಗುಂಡುಗಳನ್ನು ಕಳುಹಿಸೆಂದು ಬಾಬಾಸಾಹೇಬನಿಗೆ ಪತ್ರ ಬರೆದನು. ಆದರೆ ಬಾಬಾಸಾಹೇಬನು ಕಳುಹಿಸಲಿಲ್ಲ. ಇಷ್ಟರಲ್ಲಿ ಮುಂಡರಿಗೆಯ ಭೀಮ ರಾಯನೂ, ಡಂಬಳ ದೇಸಾಯರೂ ಬಾಬಾಸಾಹೇಬನನ್ನು ಕೂಡಿಕೊಂಡರು.

ಈ ಸುದ್ದಿಯು ವ್ಯಾನ್‌ಸನ್ ಸಾಹೇಬನಿಗೆ ಹತ್ತಿದ ಕೂಡಲೇ ಅವನು ನರಗುಂದದ ಮೇಲೆ ದಂಡೆತ್ತಿ ಬಂದನು. ಬಾಬಾಸಾಹೇಬನು ಅವನ ಪಾಳ್ಯ ವನ್ನು ಮುತ್ತಿದನು. ಬಾಬಾಸಾಹೇಬನ ಸರದಾರನೊಬ್ಬನು ವ್ಯಾನ್‌ಸನ್ ಸಾಹೇಬನ ಕುತ್ತಿಗೆ ಕೊಯ್ದು ನರಗುಂದದ ಅಗಸೇಬಾಗಿಲಿಗೆ ಕಟ್ಟಿದನು. ಕೂಡಲೆ ಸರ್‌ಜಾನ್ ಮಾಲಕಮ್ ಸಾಹೇಬನು ದಂಡೆತ್ತಿ ಬಂದನು. ಯುದ್ಧವು ಸುರುವಾಯಿತು. ಬಾಬಾಸಾಹೇಬನು ಸ್ವಯಂಶೂರನಾದರೂ ಕೈಕೆಳಗಿನ ಜನರ ಅವಿಶ್ವಾಸದಿಂದ ಪ್ರಬಲ ಪ್ರತಾಪರೂ ಬಹು ಸಂಖ್ಯಾಕರೂ ಆದ ಇಂಗ್ಲೀಷ ಸೈನಿಕರನ್ನು ಎದುರಿಸುವದು ಆತನಿಗೆ ಅಸಾಧ್ಯವಾಯಿತು. ಆಗ ಆತನು ಮನೆಗೆ ಹೋಗಿ ತನ್ನ ಮಡದಿ **ಸಾವಿತ್ರಬಾಯಿಯನ್ನೂ**, ವೃದ್ಧ ತನ್ನ ತಾಯಿಯನ್ನೂ ಕುರಿತು: “ನನ್ನ ಮೇಲೆ ಭಯಂಕರವಾದ ಗಂಡಾಂತರವು ಬಂದೊದಗಿದೆ. ಈಗ ನನ್ನನ್ನೇ ನಾನು ಕಾಪಾಡಿಕೊಳ್ಳ ಲಾರೆನು. ಈಗ ನಿಮ್ಮ ಗತಿಯನ್ನು ನೀವೇ ಕಂಡುಕೊಳ್ಳಬೇಕು” ಎಂದು

ಕಣ್ಣೀರ ಸುರಿಸಿ ಬಾಬಾಸಾಹೇಬನು ಅತ್ಯಂತ ದುಃಖದಿಂದ ಅರಮನೆಯನ್ನು ಬಿಟ್ಟು ಹೊರಟು ಹೋದನು. ಎತ್ತ ತೆರಳಿದನೋ ತಿಳಿಯಲಿಲ್ಲ.

ಬಾಬಾಸಾಹೇಬನಿಗೆ ಪ್ರಾಣಸಂಕಟ ಒದಗಿದುದನ್ನು ಕಂಡು, ವೀರ ಮಾತೆಯರಾದ ಆ ಪತಿವ್ರತೆಯರು, ಇನ್ನು ತಾವು ಬದುಕಿರುವದು ಉಚಿತ ವಲ್ಲೆಂದು ಬಗೆದರು. ಅತ್ತೆಯೂ ಸೊಸೆಯೂ ಅದೇ ದಿವಸ ಊರನ್ನು ಬಿಟ್ಟು ಹೊರಟರು. ಅವರು ಎಲ್ಲಿಯಾದರೂ ಹೋಗಿ ಪ್ರಾಣತ್ಯಾಗ ಮಾಡಿ ಮರ್ಯಾದೆ ಉಳಿಸಿಕೊಳ್ಳಬೇಕೆಂದು ಆಲೋಚಿಸಿದ್ದರು. ನರಗುಂದದಿಂದ ಒಂದು ಗಾವುದ ದೂರದಲ್ಲಿರುವ **ಮಲಪ್ರಭಾ ನದಿ** ತೀರದಲ್ಲಿರುವ ಸಂಗಳ ಗ್ರಾಮಕ್ಕೆ ಬಂದರು. ಇತ್ತ ಇಂಗ್ಲೀಷ ಸರದಾರರು ಬಾಬಾಸಾಹೇಬನನ್ನೂ ಅವನ ಮನೆಯ ಜನರನ್ನೂ ಹುಡುಕುವದಕ್ಕೆ ಆರಂಭವಾಗಿತ್ತು.

ಅಷ್ಟರಲ್ಲಿ ಮಲಪ್ರಭೆಗೆ ತಮ್ಮ ದೇಹಗಳನ್ನರ್ಪಿಸಿ ಇಹಲೋಕ ಯಾತ್ರೆ ಯನ್ನು ಮುಗಿಸಬೇಕೆಂದು ಆ ಅತ್ತೆ ಸೊಸೆಯರು, ಒಬ್ಬರ ಸೆರಗಿಗೊಬ್ಬರು ಗಂಟುಹಾಕಿಕೊಂಡು ನಡುಮಟ ನೀರೊಳಗೆ ನಡೆದರು. ಪತಿಯ ಮನಸಿಗೆ ಸಮಾಧಾನ ವೆನಿಸುವಂತೆ, ಮರ್ಯಾದೆಯಿಂದ ಪ್ರಾಣವನ್ನು ತೊರೆಯುವ ಸುಯೋಗವು ಒದಗಿತೆಂದು ಸಮಾಧಾನ ಹೊಂದಿದ, ಆ ಪತಿನಿಷ್ಠಳಾದ ಸೊಸೆಯು ಮೊದಲು ಧುಮುಕಿದಳೋ? ಅಥವಾ ಮಗನ ಮುಂದಿನ ದುರ್ದೆಶೆಯನ್ನು ನೆನೆದು, ಪ್ರಾಣ ತೊರೆಯಬೇಕೆಂದಿದ್ದ ಅತ್ತೆಯು ಮೊದಲು ಧುಮುಕಿದಳೋ? ದೇವರೇ ಬಲ್ಲನು. ಅಂತೂ ಇಬ್ಬರು ಜಲಸಮಾಧಿ ಯನ್ನೈದಿದರು.



# ಲಕ್ಷ್ಮೇಶ್ವರ ಗುಂಡವ್ವತಾಯಿ



ಮಿರಜ ಸಂಸ್ಥಾನಕ್ಕೆ ಸೇರಿದ ಲಕ್ಷ್ಮೇಶ್ವರ ವಾಡೆಯನ್ನು ಖಾನಗೌಡ ಬಹದ್ದೂರ ದೇಸಾಯಿ ಇವರು ಆಳುತಿದ್ದರು. ಇವರಿಗೆ ೧೩೧ ಹಳ್ಳಿ ಇನಾಮ ಗ್ರಾಮಗಳಿದ್ದವು. ಹಗಲ ದೀವಟಿಗೆಯಿತ್ತು. ಇವರಿಗೆ ಚನ್ನಮ್ಮತಾಯಿ, ಗುಂಡವ್ವತಾಯಿ ಎಂಬ ಇಬ್ಬರು ಧರ್ಮಪತ್ನಿಯರಿದ್ದರು. ಮೊದಲನೆ ಹೆಂಡತಿಗೆ ಬಸವಂತಬಾಯಿ, ತಾಯಿಬಾಯಿ, ಎಂದು ಇಬ್ಬರು ಹೆಣ್ಣು ಮಕ್ಕಳಿದ್ದರು. ಚಿಕ್ಕ ಹೆಂಡತಿಗೆ ಈರುಬಾಯಿ, ನೀಲುಬಾಯಿ ಯೆಂಬ ಇಬ್ಬರು ಹೆಣ್ಣುಮಕ್ಕಳೂ, ಚೋಳರಾಯನೆಂಬ ಒಬ್ಬ ಗಂಡು ಮಗನೂ ಇದ್ದರು.

ಗುಂಡವ್ವ ತಾಯಿಯ ಮಗನಾದ **ಖಾನಬಹದ್ದೂರ ದೇಸಾಯಿಗೌಡ ಚೋಳರಾಯನು** ೧೩ ದಿವಸದ ಕೂಸು ಇದ್ದಾಗ, ಇಂಗ್ಲೀಷರು ಅಲ್ಲಿ ಕದನ ಸುರುವು ಮಾಡಿದರು. ನರಗುಂದದ ಬಾಬಾಸಾಹೇಬರೂ, ಹಮ್ಮಿಗಿ ದೇಸಾಯರೂ, ಡಂಬಳ ದೇಸಾಯರೂ ಒಕ್ಕಟ್ಟಾಗಿ ಇಂಗ್ಲೀಷರು ಬರಗೊಡಬಾರದೆಂದು ಬಹಳ ಸಾಹಸ ಪಟ್ಟರು. ಮುಂಡರಗಿ ಮಂಡಗ್ಯೆ ಭೀಮರಾಯನು ಬತ್ತಲೆ ಕುದುರೆ ಹತ್ತಿ ದೇಸಾಯರ ಸಹಾಯಕ್ಕಾಗಿ ಓಡಿ ಬಂದನು.

ಅಷ್ಟರಲ್ಲಿ ಇಂಗ್ಲೀಷರು ಒಳಸಂಚು ನಡೆಯಿಸಿ ಮದ್ದಿನ ಕೋಣೆಗೆ ಬೆಂಕಿ ಹಚ್ಚಿಸಿದರು. ಆದನ್ನು ಆರಿಸಲು ದೇಸಾಯರ ದಂಡು ತೊಡಗಿದಾಗ, ಇಂಗ್ಲೀಷರ ದಂಡಾಳು ರಾಜವಾಡೆಗೆ ಮುತ್ತಿಗೆ ಹಾಕಿದರು.

ವೈರಿಗಳ ಕೈಗೆ ಸಿಗಬಾರದೆಂದು ಖಾನಬಹದ್ದೂರ ದೇಸಾಯರು ಸಾಧುವೇಷದಿಂದ ರಾಜವಾಡೆಯನ್ನು ಬಿಟ್ಟು ಪಾರಾದರು. ಆವರ ಹಿಂದೆ ಅವರ ಗುರುಗಳಾದ ಬೆಣ್ಣಿಹಳ್ಳಿ ಸ್ವಾಮಿಗಳೂ ದಯಮಾಡಿಸಿದರು.

ಆಗ ಗುಂಡವ್ವ ತಾಯಿಗಳ ತಲೆಯ ಮೇಲೆ ಆಕಾಶವೇ ಕಡಕೊಂಡು ಬಿದ್ದಂತಾಯಿತು. ಯೋಚನೆ ಮಾಡಲಿಕ್ಕೆ ಸಹಾ ಕ್ಷಣ ಹೊತ್ತಿಲ್ಲ. ಶತ್ರುಗಳು ರಾಜವಾಡೆಗೆ ಏರಿ ಬರುತಲಿದ್ದಾರೆ. ಇನ್ನು ಅವರ ಕೈಗೆ ಸಿಕ್ಕು ತಮ್ಮ ಮಾನಕಳಕೊಳ್ಳಬಾರದೆಂದು, ಲಗುಬಗೆಯಿಂದ ಪುರುಷ ವೇಷವನ್ನು ಧರಿಸಿ, ೧೩ ದಿವಸದ ಗಂಡು ಕೂಸನ್ನು ಎದೆಗೆ ಕಟ್ಟಿಕೊಂಡು, ಕೈಯಲ್ಲಿ ಖಡ್ಗವನ್ನು ಹಿಡಿದು, ಕುದುರೆಯನ್ನೇರಿ ಲಕ್ಷ್ಮಿಗೆ ತೌರುಮನೆಯಾದ ಲಕ್ಷ್ಮೇಶ್ವರವನ್ನೂ, ತಮ್ಮ ಸುಖದ ಬೀಡಾದ ರಾಜವಾಡೆಯನ್ನೂ ಬಿಟ್ಟು ಹೊರಟರು.

ಇಡೀ ದಿವಸ ಅನ್ನ ನೀರು ಇಲ್ಲದೆ ಗುಂಡವ್ವತಾಯಿಗಳು ೧೩ ದಿವಸದ ಬಾಣಂತಿ, ಎಳೆಯ ಕೂಸನ್ನು ಕಟ್ಟಿಕೊಂಡು ಪತಿಯನ್ನಗಲಿ ತನ್ನ ಅಕ್ಕನ ಮನೆಯಾದ **ಕುಂದಗೋಳ ದೇಶಪಾಂಡೆಯವರ** ಮನೆಗೆ ಬಂದು ಇಳಿದರು. ಆ ದೇಶಪಾಂಡೆಯವರು ಇಂಗ್ಲೀಷರಿಂದ ತಮಗೇನು ದಾಳಿ ಬರುವದೋ ? ಎಂದು ಹೆದರಿ ಗುಂಡವ್ವತಾಯಿಗಳನ್ನು ಇರಿಸಿಕೊಳ್ಳಲಿಲ್ಲ.

ಮರುದಿವಸವೇ ಗುಂಡವ್ವ ತಾಯಿಗಳು ದಿಕ್ಕಿಲ್ಲದ **ಪರದೇಶಿಯಂತೆ** ತಮ್ಮ ಹಳೇ ಬೀಗತನದ **ಅಣ್ಣಿಗೇರಿ ದೇಸಾಯರ** ಮನೆಗೆ ಹೋದರು. ಅವರೂ ಹೆದರಿ ಇವರನ್ನು ಹಚ್ಚಿಕೊಳ್ಳಲಿಲ್ಲ ಅಲ್ಲಿಂದ ಆ ಮಹಾ ತಾಯಿಗಳು **ಹಂದಿಗನೂರ ದೇಸಾಯರ** ಮನೆಗೆ ಹೋದರು. ಅವರೂ ಅಂಜಿದರು. ಹೀಗೆಯೇ ಅಲೆಯುತ್ತಾ ಕೂಸಿನ ನೆತ್ತಿಗೆ ಎಣ್ಣೆ ನೀರು ಇಲ್ಲದೆ, ಗಾಳಿ ಮಳೆ ಚಳಿ ಕತ್ತಲೊಳಗೆ ಕಣ್ಣೀರಸುರಿಸುತ್ತಾ, ಗುಂಡವ್ವತಾಯಿಗಳು **ನಾಲವತ್ತಾಡ ದೇಸಾಯರ** ಮನೆಗೆ ಹೋದರು. ಅಲ್ಲಿಯೂ ಅವರಿಗೆ ಆಶ್ರಯ ಸಿಗಲಿಲ್ಲ. ಎತ್ತ ಹೋದರು ಅವರಿಗೆ ಆಶ್ರಯದಾತರು ಸಿಗಲಿಲ್ಲ. ಆಗ ಅವರು ನಿರಾಶರಾಗಿ ಕಟ್ಟ ಕಡೆಗೆ ತಮ್ಮ ತೌರುಮನೆಯಾದ **ನರೇಂದ್ರದ ನಾಡಗೌಡರ** ಮನೆಗೆ ಬಂದರು.

ಎಷ್ಟೇ ಆದರೂ ಹೆಣ್ಣು ಕೆಟ್ಟರೆ ( ಕಷ್ಟಬಂದರೆ ) ತೌರು ಮನೆ ಯೆಂಬುದು ಸುಳ್ಳಲ್ಲ. ಆ ನಾಡಗೌಡರು ಮಗಳಿಗೆ ಆಶ್ರಯಕೊಟ್ಟರು. ಮಗಳ ಮತ್ತು ಮೊಮ್ಮಗನ ವನವಾಸವನ್ನು ನೆನೆದು ದುಃಖಿಸಿದರು.

ಅಳಿಯನ ಹಾಡನ್ನು ನೆನೆದು ಅತ್ತರು. ಹೀಗೆ ಸ್ವಲ್ಪ ದಿವಸಗಳು ಕಳೆಯು ವದರೊಳಗೆ ಗುಂಡವ್ವ ತಾಯಿಗಳು ಅಲ್ಲಿ ಇರುವದು ಸುದ್ದಿ ಹತ್ತಿ, ನಾಡಗೌಡರಿಗೆ ಸರಕಾರದಿಂದ ತಸ್ತಿಯಾಯಿತು. ಆಗ ಗುಂಡವ್ವ ತಾಯಿಗಳು ತನ್ನ ತೌರುಮನೆಯುವರಿಗೆ ತಮ್ಮಿಂದ ತೊಂದರೆ ಯಾಗಬಾರ ದೆಂದು ಅಲ್ಲಿಂದ ಹೊರಟು ಧಾರವಾಡದ ಚರಂತಿಮಠದ ಗಂಗಯ್ಯಸ್ವಾಮಿ ಗಳಲ್ಲಿಗೆ ಹೋದರು. ಅವರು ಇವರನ್ನು ೩ ತಿಂಗಳು ಗುಪ್ತದಲ್ಲಿಟ್ಟು, ಸರಕಾರದಿಂದ ಬರುವ ಎಲ್ಲ ತಸ್ತಿಗಳಿಗೂ ಎದೆಗೊಟ್ಟು, ಗುಂಡವ್ವ ತಾಯಿ ಗಳನ್ನು ಕಷ್ಟದಿಂದ ಪಾರು ಮಾಡಿದರು.

ಮುಂದೆ ಸರಕಾರದವರು ಚನ್ನವ್ವ ತಾಯಿ ಗುಂಡವ್ವತಾಯಿ ಇವರಿಗೆ ತಿಂಗಳಿಗೆ ೬೦ ರೂಪಾಯಿಯಂತೆ ಪೋಟಿಗಿ ಮಾಡಿದರು. ಕೆಚ್ಚೆದೆಯ ಅಭಿಮಾನಿಗಳಾದ ಆ ತಾಯಿಗಳು ಆ ಪೋಟಿಗಿ ಹಣವನ್ನು ಮುಟ್ಟಲಿಲ್ಲ. ಖಾನಬಹದ್ದೂರ ದೇಸಾಯಿಗೌಡ ಚೋಳರಾಯರ ಹೆಸರಿಲೆ ಲಕ್ಷಾಂತರ ಆ ಪೋಟಿಗಿ ಹಣವು ಈಗಲೂ ಸರಕಾರದಲ್ಲಿ ಬಿದ್ದಿದೆ. ಅವರ ವಂಶಿಕರಾದ ೧ ರಾವಸಾಹೇಬ ೨ ಬಾಬುಸಾಹೇಬ ೩ ಅಪ್ಪಾಸಾಹೇಬ ೪ ರಾಚಪ್ಪ ಗೌಡ ಬಹದ್ದೂರ ದೇಸಾಯಿ ೫ ಶಂಕರಗೌಡ ಬಹದ್ದೂರ ದೇಸಾಯಿ ೬ ಚನ್ನಬಸಪ್ಪಗೌಡ ಬಹದ್ದೂರ ದೇಸಾಯಿ ಮೊದಲಾದವರು ಲಕ್ಷ್ಮೇಶ್ವರದಲ್ಲಿ ಈಗಲೂ ಇದ್ದಾರೆ. ಅವರೂ ಸಹಾ ಆ ಹಣವನ್ನು ಮುಟ್ಟಲ್ಲ.

ಆ ಮೇಲೆ ನಮ್ಮ ಗುಂಡವ್ವ ತಾಯಿಗಳು ಮಗನು ಸ್ವಲ್ಪ ದೊಡ್ಡವ ನಾದ ಮೇಲೆ ಲಕ್ಷ್ಮೇಶ್ವರಕ್ಕೆ ಹೋದರು. ನಿಜಾಮ ಇಲಾಖಾ ಸಾಹೇಬನ ಕೂಡ ಕಾದಿ ೧೨೦೦ ಕೂರಿಗೆ ಜಮೀನು ಪಡೆದರು. ಪತಿಯ ದರ್ಶನವಿಲ್ಲದೆ ಅವರ ಚಿಂತೆಯೊಳಗೆ ಕಾಲಹಾಕುತ್ತಾ, ಹಾಗೂ ಹೀಗೂ ಕಾಲಕಳೆಯುತ್ತಿದ್ದರು. ಒಮ್ಮೆ ಖಾನಬಹದ್ದೂರ ದೇಸಾಯರು ಸಾಧುವೇಷದಿಂದಲೇ ರಾಜವಾಡೆಗೆ ಬಂದು, ಮೇಣೇದ ಗಾಡಿಖಾನೆ, ಕುದುರೆಮನೆ, ತಾವು ಕೂಡ್ರುತ್ತಿದ್ದ ದರಬಾರ ಕಟ್ಟೆ, ಮುಂತಾದವನ್ನು ನೋಡಿಕೊಂಡು ಹಿತ್ತಲಿಗೆ ಹೋಗಿ ತಮ್ಮ ಕೈಯ್ಯಲ್ಲಿದ್ದ ಚರಿಗೆಯನ್ನು ಬಾವಿಯಲ್ಲಿ ಬಿಟ್ಟು, ನೀರು ಸೇದಿಕೊಂಡು ಮುಖಮಾರ್ಜನೆ ಮಾಡಿಕೊಂಡು ಮನೆಯಲ್ಲಿದ್ದ ಅಡಿಗೆ ಆಳು ಮಗಳೊಡನೆ ಹೆಂಡತಿ ಮಕ್ಕಳ

ಯೋಗಕ್ಷೇಮವನ್ನು ಕೇಳಿಕೊಂಡು ತಿರುಗಿ ಹೋದರಂತೆ, ಆಗ ಇವರು ಇಂಥವರೇ ಎಂದು ಯಾರಿಗೂ ಗುರುತು ಹತ್ತಲಿಲ್ಲವಂತೆ! ಹಿಂದಿನಿಂದ ಈ ಸುದ್ದಿಯು ಗುಂಡವ್ವ ತಾಯಿಗೆ ಹತ್ತಿಗೆ ಕೂಡಲೇ, ಅವರೇ ತಮ್ಮ ಪತಿರಾಜರೆಂದೂ, ಆಗ ನನ್ನನ್ನು ಯಾಕೆ ಕರೆಯಲಿಲ್ಲೆಂದೂ ಮರುಗಿ ಅತಿಯಾಗಿ ದುಃಖದಿಂದ ಪ್ರಳಾಪಿಸಿದರಂತೆ.

ಹೀಗೆ ದೇಸಾಯರು ಎರಡು ಮೂರು ಬಾರಿ ರಾಜವಾಡೆಗೆ ಬಂದು ಹೋದರಂತೆ! ಆದರೆ ಹೆಂಡರು ಮಕ್ಕಳಿಗೆ ಭೆಟ್ಟಿಯಾಗಿಲ್ಲ. ಕೊನೆಗೆ ಅವರು ಕಾಸಿಯಲ್ಲಿ ಹೋಗಿ ಮರಣ ಹೊಂದಿದರಂತೆ, ಅಂತೂ ನಮ್ಮ ಗುಂಡವ್ವ ತಾಯಿಯು ಚಿಕ್ಕವಯಸ್ಸಿನಲ್ಲಿಯೇ ಗಂಡನು ಬದುಕಿದ್ದೂ, ಇಲ್ಲದಂತೆ ಕೊನೆಯವರೆಗೂ ಅಗಲುವಿಕೆಯನ್ನು ಹೊಂದಿ, ಅದೇ ಚಿಂತೆಯೊಳಗೆ ಒಂದು ದಿನ ಕರ್ನಾಟಕದಲ್ಲಿ ಕಣ್ಮರೆಯಾದರು.

---

# ಮಹಾರಾಣಿ ದೇವಾಜಮ್ಮಣ್ಣಿ



ಇವರು ಮೈಸೂರ ಅರಮನೆಯ ಪ್ರಭುವಂಶದ ಮೂಲ ಜನನಿ. ಹದಿನಾಡು ಧೊರೆಯಾದ ಚಾಮರಾಜರ ಸುಪುತ್ರಿ. ವೀರ ಯದುರಾಯರ ಧರ್ಮಪತ್ನಿ. ಇವರು ತುಂಬಾ ಪ್ರಾಯದಲ್ಲಿದ್ದಾಗ ತಂದೆಯವರು ಕಾಲ ವಾದರು. ಏಕೈಕಪುತ್ರಿ. ತಾಯಿ ಆಶ್ರಯ ಮಾತ್ರ ಅವರಿಗಿತ್ತು. ಆಗ ಇನ್ನೂ ಅವಿವಾಹಿತರು. ಎಂಥಾ ಧಾರುಣ ಪರಿಸ್ಥಿತಿ. ದುಷ್ಕರ್ಮಿ ಪಾಳೆಯ ಗಾರ ಮಾರನಾಯಕನ ಕಣ್ಣು ರಾಜಪುತ್ರಿಯ ಮೇಲೆ ಬಿದ್ದಿತು. ಏನು ಮಾಡಬೇಕು ? ಹೆಂಗರುಳು ! ಸೈನ್ಯ ಬಲವಿಲ್ಲ ಬೆನ್ನು ತಟ್ಟುವ ಅಣ್ಣ ತಮ್ಮಂದಿರಿಲ್ಲ. ವೃದ್ಧ ಮಾತೆಯ ಕೊರಗು.

ಆಗಿನ ಸಂದರ್ಭದಲ್ಲಿ ವೀರ ಪುತ್ರಿಯಾದ ದೇವಾಜಮ್ಮಣ್ಣಿಯವರು ಜಾತಿ ಸಾಂಕರ್ಯಕ್ಕೆ ಮನಸ್ಸು ಕೊಡಲಿಲ್ಲ. ಧೈರ್ಯಗೆಡಲಿಲ್ಲ. ಕುಲಮಾತೆಯಾದ **ಚಾಮುಂಡಿ ದೇವಿ** ಯನ್ನು ನಂಬಿದರು. ದೈವ ಸಂಕಲ್ಪ. ಯದುರಾಯರು ಎತ್ತಣಿಂದಲೋ ಬಂದರು. ಸಮಯಸಾಧಿಸಿ ಪಾಳೆಯಗಾರನನ್ನು ಕೊಂದು, ರಾಜಪುತ್ರಿಯನ್ನು ಮದುವೆಯಾದರು. ಕಷ್ಟದಲ್ಲಿ ಧೃತಿಗೆಡದೆ ಹೆಣ್ಣುತನದ ಪವಿತ್ರತೆಯನ್ನು ಕಾಪಾಡಿಕೊಂಡ ಪುಣ್ಯಶಾಲಿನಿಯವರ ಸಂತಾನವೇ ನಮ್ಮ ಮೈಸೂರ ಅರಮನೆಯ ಪ್ರಭುವಂಶ. ಆ ವೀರಪುತ್ರಿ ವೀರನಾರಿಯಾದಳು. ಇಬ್ಬರು ಸುಪುತ್ರರನ್ನು ಪಡೆದು ವಂಶವನ್ನು ಬೆಳೆಯಿಸಿದರು.



# ಮಹಾರಾಣಿ ಲಕ್ಷ್ಮಮ್ಮಣ್ಣಿ



ಈ ಮಹಾತಾಯಿಯು ಕತ್ತಿ ಗೋಪಾಲರಾಜೇ ಅರಸಿನವರ ಪುತ್ರಿ. ಇಮ್ಮಡಿ ಕೃಷ್ಣರಾಜ ಒಡೆಯರ ಮೂರನೆಯ ಪತ್ನಿ. ಒಡೆಯರು ಕಾಲವಾದಾಗ ಇವರಿಗೆ ಸುಮಾರು ೨೦ ವರ್ಷ. ಇವರಿಗೆ ಒಬ್ಬಳೇ ಹೆಣ್ಣುಮಗಳು. ಯಜಮಾನರ ಕಾಲಾನಂತರ ಕೇವಲ ೧೦ ವರ್ಷಗಳಲ್ಲಿ ಎರಡು ಪಟ್ಟಗಳು ಮುಗಿದವು. ಇವರಿಗೆ ೩೦ನೆಯ ವಯಸ್ಸು. ರಾಜಸಂತತಿಯಲ್ಲಿ ಗಂಡು ಮಕ್ಕಳೇ ಇರಲಿಲ್ಲ ಚಾಮರಾಜ ಒಡೆಯರೆಂಬ ಹೆಸರಿನಿಂದ ಮೂರು ವರ್ಷದ ಮಗುವಿಗೆ ಪಟ್ಟವಾಯಿತು.

ಮಹಾರಾಣಿ ಲಕ್ಷ್ಮಮ್ಮಣ್ಣಿಯವರಿಗೆ ಎಳ್ಳಷ್ಟೂ ಸುಖವಿರಲಿಲ್ಲ. ಅವರು ಪಟ್ಟ ಹಿಂಸೆಗಳನ್ನು ಸಹಿಸಿದ ಕಷ್ಟಗಳನ್ನು ಬರೆಯಲು ಅಸಾಧ್ಯ. ಅವರಿಗೆ ಅರಮನೆಯ ವಾಸವೇ ಕಾರಾಗೃಹವಾಯಿತು. ಹಂಸತೂಲಿಕಾ ತಲ್ಪವೇ ಶಿಲಾತಲ್ಪವಾಯಿತು. ಪ್ರಾಣ ಸಂರಕ್ಷಣೆಗಾಗಿ ಆಹಾರ. ಮಾನ ಸಂರಕ್ಷಣೆಗಾಗಿ ಉಡುಪು. ರಾಜಭೋಗದ ಸುಖವಿಲ್ಲ. ಖಾಸ ಚಾಮರಾಜ ಒಡೆಯರನ್ನು ಸಾಕಿ ಸಲಹಿದರು. ಸುಲ್ತಾನರ ಪ್ರಾಬಲ್ಯದ ದೆಸೆ. ಪ್ರಭುಗಳ ಮಾತೇನೂ ನಡೆಯುತ್ತಿರಲಿಲ್ಲ. ಮಹಾರಾಣಿಯವರು ರಾಜಮಾರ್ಗದಲ್ಲಿ ಬಿದ್ದಿದ್ದ ಮುಳ್ಳುಗಳನ್ನು ತುಳಿಯಲೇ ಬೇಕಾಯಿತು ಕಾಲಲ್ಲಿ ರಕ್ತ ಬರುವ ದಂತಿರಲಿ ಕಣ್ಣಿನಲ್ಲಿ ರಕ್ತಾಶ್ರುಗಳನ್ನು ಮಿಡಿಯುತ್ತಿದ್ದರು. ವಿಧಿ ವಿಲಾಸ ಆಗ ಮಹಾರಾಜರು ಕಾಲವಾದರು. ಅವರಿಗೆ ಕೇವಲ ೨೨ ವಯಸ್ಸು. ಅಷ್ಟು ಹೊತ್ತಿಗೆ ದೇವರು ಯದುವಂಶಕ್ಕೆ ಒಂದು ಗಂಡು ಸಂತಾನವನ್ನು ಕರುಣಿಸಿದ್ದನು. ಆ ಸಂತಾನವೇ ಶ್ರೀ ಕೃಷ್ಣರಾಜೇಂದ್ರ ಭೂಪಾಲರು. ಆಗ ಮಗುವಿಗೆ ಐದು ವರ್ಷ.

ಮೈಸೂರು ಯುದ್ಧ ಮುಗಿದು ಬ್ರಿಟಿಷ ಸರಕಾರದವರು :ಯದುವಂಶ ಸಂತತಿಗೆ ರಾಜ್ಯವನ್ನು ವಹಿಸಿಕೊಟ್ಟರು. ವೃದ್ಧಮಾತೆ ಲಕ್ಷ್ಮಮ್ಮಣ್ಣಿಯವರು

ಮುಮ್ಮಡಿ ಪ್ರಭುಗಳಿಗಾಗಿ ಬದುಕಿದ್ದರು. ರಾಜ್ಯಕಾರ್ಯಗಳನ್ನು ಮಂತ್ರಿಗಳ ಸಹಾಯದಿಂದ ನಡೆಯಿಸುತ್ತಿದ್ದರು ಈ ಮಹಾತಾಯಿಯವರು ಮೈಸೂರು ನಾಡಿಗೆ ಸಲ್ಲಿಸಿದ ಸೇವೆ ಅಷ್ಟಿಷ್ಟಲ್ಲ. ಒಡೆಯರಿಗೆ ೨೫ನೆಯ ವಯಸ್ಸಿನಲ್ಲಿ ಮಹಾಮಾತೃಶ್ರೀ ಲಕ್ಷ್ಮಮ್ಮಣ್ಣಿಯವರು ಪರಂಧಾಮವನ್ನು ಸೇರಿದರು.

---

# ಮಹಾರಾಣಿ ಕೆಂಪನಂಜಮ್ಮಣ್ಣಿ



ಇಪ್ಪತ್ತು ಮೂರನೆಯ ಪ್ರಭುಪಟ್ಟ ಶ್ರೀ ಚಾಮರಾಜ ಒಡೆಯರಿಗೆ ಲಭಿಸಿತು. ಈ ಶ್ರೀ ಕೆಂಪನಂಜಮ್ಮಣ್ಣಿಯವರು ಅವರ ಪಟ್ಟ ಮಹಿಷಿ. ಪ್ರಭುಗಳು ಕೇವಲ ಚಿಕ್ಕ ವಯಸ್ಸಿನಲ್ಲಿಯೇ ಕಾಲವಾದರು. ಆಗ ಅವರ ಹಿರಿಯ ಕುಮಾರ ನಾಲ್ವಡಿ ಶ್ರೀ ಕೃಷ್ಣ ಭೂಪಾಲರಿಗೆ ಹತ್ತು ವರ್ಷ. ಯುವರಾಜ ಕಂಠೀರವರಿಗೆ ಆರು ವರ್ಷ. ಮಕ್ಕಳೆಲ್ಲಾ ಚಿಕ್ಕವು. ಮಹಾ ತಾಯಿ ಕೆಂಪನಂಜಮ್ಮಣ್ಣಿಯವರು ೮ ವರ್ಷ ಕಾಲ ರಾಜ್ಯಭಾರ ನಿರ್ವಹಿಸಿದರು. ಅವರ ಆಳಿಕೆಯಲ್ಲಿ ಮೈಸೂರು ನಗುವ ನಂದನವಾಯಿತು. ಚಿಕ್ಕ ವಯಸ್ಸಿನಲ್ಲಿ ಪತಿವಿಯೋಗ ದುಃಖ ಒದಗಿತು. **ಒಡಲಲಿ ದುಃಖ. ಮಡಿಲಲಿ ಮಕ್ಕಳು.** ರಾಜಕುಮಾರರಿಗೆ ವಿದ್ಯಾಬುದ್ಧಿಗಳನ್ನು ಕಲಿಸಿ ಮೈಸೂರು ಪ್ರಭುವಂಶಕ್ಕೆ ಕೀರ್ತಿ ಲಕ್ಷ್ಮಿಯೆನಿಸಿಕೊಂಡರು.

ಮೈಸೂರು ಯದುವಂಶ ಮಾತೆಯರು ಕಷ್ಟಕಾಲಗಳಲ್ಲಿ ಧೈರ್ಯಗೆಡದೆ, ರಾಜ್ಯಪಾಲನೆ ಮಾಡಿ ಸಂತಾನವನ್ನು ರಕ್ಷಿಸಿ ಪ್ರಜೆಗಳನ್ನು ಕಾಪಾಡಿಕೊಂಡು ಬಂದಿರುತ್ತಾರೆ. ಆ ಕುಲಮಾತೆಯರ ತಪಃ ಪುಣ್ಯದಿಂದ ಮೈಸೂರು ನಾಡು ಅಭಿವೃದ್ಧಿಯಲ್ಲಿದೆ.

---

# ಹದಿಬದೆಯ ಹೊನ್ನಮ್ಮ

## ( ೧೬೮೦ )

—✝—

ಮೈಸೂರು ಚಿಕ್ಕದೇವರಾಜರ ಪಟ್ಟದರಸಿಯಾದ ಎಳವಂದೂರು ದೇವಮ್ಮಣ್ಣಿಯವರ ಊಳಿಗದಲ್ಲಿ ದಾಸಿಯೊಬ್ಬಳಿದ್ದಳು. ಈಕೆಯೇ ಹದಿ. ಬದೆಯ ಹೊನ್ನಮ್ಮ. ಈಕೆಯು ರಾಣಿವಾಸದಲ್ಲಿ ಎಲೆ ಅಡಿಕೆಯನ್ನು ಸಜ್ಜುಗೊಳಿಸಿ ಕೊಡುತ್ತಿದ್ದುದರಿಂದ, ಈಕೆಗೆ ಸಂಚಿ ಹೊನ್ನಮ್ಮನೆಂತಲೂ ಕರೆಯುತ್ತಿದ್ದರು.

ಹೊನ್ನಮ್ಮನು ಎಳವಂದೂರಲ್ಲಿ ಹುಟ್ಟಿದಳು. ಈಕೆಯ ತಂದೆ ತಾಯಿಗಳು ಈಕೆ ಚಿಕ್ಕವಳಿರುವಾಗಲೇ ತೀರಿಕೊಂಡರು. ಈಕೆಯು ದೇವಮ್ಮಣ್ಣಿಯವರ ಸೇವೆಯಲ್ಲಿ ಸೇರಿ, ಅವರೊಡನೆ ಮೈಸೂರು ಅರಮನೆಗೆ ಬಂದಳು. ಅನಾಥಳಾದ ಈಕೆಗೆ ದೊಡ್ಡವರ ಸಹಾಯವು ಈ ರೀತಿಯಾಗಿ ದೊರೆತದ್ದು, ಈಕೆಯ ಪುಣ್ಯವಿಶೇಷವು. ಹೊನ್ನಮ್ಮನು ದೇವಮ್ಮಣ್ಣಿಯವರನ್ನು ತನ್ನ ತಾಯಿಯಂತೆ ನಂಬಿ ನಡೆದಳು. ಹೊನ್ನಮ್ಮನ ಪ್ರಾಮಾಣಿಕತನ ಸ್ವಾಮಿನಿಷ್ಠೆ, ಸರಲ ಸ್ವಭಾವವನ್ನು ಕಂಡು, ದೇವಮ್ಮಣ್ಣಿಯವರು ಆಕೆಯನ್ನು ತಮ್ಮ ಹೊಟ್ಟೆಯ ಮಗಳಂತೆ ಕಾಣುತ್ತಿದ್ದರು. ಇಷ್ಟೇ ಅಲ್ಲ, ಆಕೆಯ ವಿಷಯದಲ್ಲಿ ಹೆಚ್ಚಿನ ಅಭಿಮಾನ, ಮತ್ತೂ ವಿಶೇಷವಾದ ವಿಶ್ವಾಸವಿತ್ತು.

ಹೊನ್ನಮ್ಮನ ಜಾಣತನವನ್ನೂ ಚುರುಕುಬುದ್ಧಿಯನ್ನೂ ನೋಡಿ ಆಕೆಗೆ ವಿದ್ಯೆಕಲಿಸಬೇಕೆಂದು ರಾಣಿಯವರು ಬಗೆದರು. ಮಹಾರಾಜರ ಮುಖಾಂತರ ಆಸ್ಥಾನ ಪಂಡಿತರಾದ ಅಳಸಿಂಗಾಚಾರ್ಯರಲ್ಲಿ ವಿದ್ಯಾಭ್ಯಾಸಕ್ಕೆ ಅನುಕೂಲಗಳನ್ನು ಒದಗಿಸಿಕೊಟ್ಟರು. ಕೆಲವು ಕಾಲದ ಮೇಲೆ ತೊತ್ತಾದ ಹೊನ್ನಮ್ಮನು ವಿದ್ಯಾವತಿಯಾದಳು. ಸಂಸ್ಕೃತ ಕನ್ನಡ ಭಾಷೆಯಲ್ಲಿ ಪಾಂಡಿತ್ಯವನ್ನು ಸಂಪಾ

ದಿಸಿದಳು. ಕಾವ್ಯ, ಅಲಂಕಾರ ನಾಟಕ, ಸಾಹಿತ್ಯಗಳನ್ನು ಪರಿಶೀಲಿಸಿ, ಅನೇಕ ಇತಿಹಾಸ ಪುರಾಣಗಳನ್ನು ಓದಿದಳು. ಮುಂದೆ ಆಕೆಯು ಮದುವೆ ಯಾದಂತೆ ಕಾಣುವುದಿಲ್ಲ. ಅದೇಕೋ? ತಿಳಿಯದು.

ಒಂದು ದಿನ ಚಿಕ್ಕದೇವರಾಜ ಒಡೆಯರು ಅಂತಃಪುರದಲ್ಲಿ ರಾಣಿಯವ ರೊಡನೆ ವಿನೋದವಾಗಿ ಸಮಯವನ್ನು ಕಳೆಯುತ್ತಿರುವಾಗ, ಅವರ ಬಳಿಯಲ್ಲಿ ಹೊನ್ನಮ್ಮನನ್ನು ಕಂಡರು. ಆಗ ಅವರು ಹೊನ್ನಮ್ಮನನ್ನು ಕರುಣಾದೃಷ್ಟಿಯಿಂದ ನೋಡಿ, ಮಹಾರಾಣಿಯವರನ್ನು ಕುರಿತು ಇಂತು ನುಡಿದರು.

ಅರಸಿ ಕೇಳೀ ಹೊನ್ನಿ ಸರಸಸಾಹಿತ್ಯದ । ವರದೇವತೆ ತಾನೆಂದು ।
ಪರಮಾರ್ಥವಾದಿ ಅಳಸಿಂಗರಾರ್ಯನು । ಪರಿ ಪರಿಯೊಳು ಬಣ್ಣಿಪನು ॥
ಓದುಗಲಿಸುವರೊಲಿದು ಪೊಗಳಿದೊಡಾ । ಓದುಗಲಿವರೋದುಗಳು ।
ಮೇದಿನಿಯೊಳು ಮೇಲೆನಿಪುದೆಂಬುದುಲೋಕ । ವಾದವೈಸಲೆ ರಾಣಿಕೇಳು ॥
ಇವಳು ಕಾವ್ಯಾಲಂಕಾರ ನಾಟಕಗಳ । ಪವಣಗೆಯಿರುವ ಬಲ್ಲವಳು ।
ಇವಳ ಸಾಹಿತ್ಯದ ಸವಿಗೆಳಸುತ್ತಿನ್ನ । ಕಿವಿಗಳು ಕದಬುಗೊಂಡಿಹವು ।

ಈಕೆಯ ಸಾಹಿತ್ಯದ ಸವಿಯನ್ನು ಕೇಳಲು ನನ್ನ ಕಿವಿಗಳು ಹಾತೊರೆಯು ತ್ತಿರುವವು. ಆದ್ದರಿಂದ ಹಿತಮಿತವಾದ ಹುರುಳು ತಿರುಳುಗಳಿಂದ ಕೂಡಿದ ಕವಿತೆಯೊಂದನ್ನು ಹೇಳಿಸು ಯೆನ್ನಲು,

ಎಂದ ರಾಯನ ನುಡಿಗಂ ವಿನಯಗೂಡಿ । ಪಿಂದೆಗೆಯದಿರೆ ಪಟ್ಟದರಸಿ ।
ಕಂದ ಬಾರೆನ್ನ ಕಟ್ಟಾಣಿ ಪೆಣ್ಮಣಿಯೆ ಬಾ । ರೆಂದು ಮುಂದಕೆ ಬರಿಸಿದಳು ।
ಕನ್ನಡ ಜಾಣೆ ನೀ ಬಾರೆಂದು ಕರವಿಡಿ । ದವಳತನ್ನೊತ್ತಿಗೆ ಬರಿಸಿ ।
ಎನ್ನೊಳು ನೆವಮಿನಿತಿಲ್ಲದೆರಕಗೂಡಿ । ಮನ್ನಿಸಿ ನುಡಿದಳಿಂತೆಂದು ॥

ಮಗೂ! ಕಲಿತ ವಿದ್ಯೆಯನ್ನು ಬಲ್ಲವರ ಮುಂದೆ ಹೇಳಲು ಅದಕ್ಕೆ ಫಲವುಂಟು. ಆದ್ದರಿಂದ ನೀನು ಅಲಸದೆ, ನಾಚದೆ, ಅಂಜದೆ, ಅಳಕದೆ, ಕೆಲವು ಕವನಗಳನ್ನು ಹೇಳೆನ್ನಲು,

ಆಗ ಹೊನ್ನಮ್ಮನು ಚಿತ್ತವ ಬಲಿದು ಧೈರ್ಯಗೊಂಡು ರಾಜನೆದುರಿಗೆ ಇಂತು ಬಿನ್ನವಿಸಿದಳು. ಅರಸಾ! ನಿಮ್ಮಡಿಗಳ ಮತ್ತು ಅರಸಿಯರಡಿಗಳ ಊಳಿಗ ಒಲುಮೆಯೆನಗೆ ಅಖಿಳಾರ್ಥ ಸಾಧನವಾಗಿದೆ. ನಿಮ್ಮಡಿಗಳ ಒಲವರಿತಿರ್ಪುದೆನ್ನ ಕಜ್ಜ. (ಕೆಲಸ) ನಿಮ್ಮ ಊಳಿಗವೆನ್ನ ಧರ್ಮ. ನಿಮ್ಮ ಪ್ರೇಮ ಗಳಿಸುವದೆನ್ನ ಮನೋರಥ. ಇಷ್ಟೆಲ್ಲಾ ಭಾಗ್ಯವು ನನಗಿರುವಾಗ, ಎನ್ನ ಭಾಗ್ಯಕ್ಕೆ ಸರಿಯುಂಟೆ? ಎಂದು ಹಲವು ಬಗೆಯಿಂದ ರಾಜನನ್ನು ಬಹು ಭಕ್ತಿಯಿಂದ ಕೊಂಡಾಡಿ, ನಿಮ್ಮ ಪಾದದ ಊಳಿಗದೊಳು ಬೆಳೆದ ಬಾಲಕಿಯೆಂದು ಆದರದಿಂದ ಆಲಿಸಿರಿ, ಪರಮ ಪತಿವ್ರತೆಯರ ನಡತೆಯನಿಲ್ಲಿ ಪುರುಳುಗೊಳಿಸಿ, **ಹದಿಬದೆಯ ಧರ್ಮವ** ಪೇಳ್ವೆನೆಂದು ಹೇಳಲನುವಾದಳು. ಅವುಗಳ ಪೈಕಿ ಕೆಲವನ್ನು ನಾವು ಇಲ್ಲಿ ಕೊಡುವೆವು.

**ಉಣದುಡದೊಡಲ ದಂಡಿಸುವಾಯಸವಿಲ್ಲ । ಪಣವವೆಚ್ಚಿಸುವ ಪಾಡಿಲ್ಲ**
**ಗುಣ ವಂತೆಯರೆಸಗುವ ಪತಿಶಶ್ರೂಷೆ । ಗೆಣೆಯಹ ತಪವಿನ್ನಳವೇ ?॥**

**ಮನೆಯ ತೊರೆದು ಮನವಾಳ್ತಿಯನುಳಿದುತ । ನ್ನನುಕೂಲದಾಸೆಯನಳಿದು ।**
**ಬನದೊಳುಗೆಯ್ವ ಬರಿಯ ತಪಗಳು ಕುಲ । ವನಿತೆಯರಿರವಿಗೆದೆಸರೆಯೆ ।**

**ಮನೆಯೆ ಧರ್ಮಾಶ್ರಮ ಮನೆವಾಳ್ತಿಯೆ ಧರ್ಮ । ವಿನಿಯನೂಳಿಗವೆ ದೇವಪೂಜೆ ।**
**ಮನದಿನಿಯನ ನೆನೆವುದೆ ಸಾಧ್ವಿಯರಿಗೆ । ಘನಮೋಕ್ಷ ದೊರೆಯುವದು ।**

ಹೀಗೆ ಹೊನ್ನಮ್ಮನು ಪತಿಭಕ್ತಿ ಸಂಬಂಧವಾದ ನೂರಾರು ಪದಗಳನ್ನು ಹಾಡಿರುವಳು. ಕುಟುಂಬದಲ್ಲಿ ಹೆಂಗಳೆಯರ ಸ್ಥಾನವಾವುದು? ಸತಿಯ ಕರ್ತವ್ಯಗಳೇನು? ಗಂಡಹೆಂಡಂದಿರು ಹೇಗೆ ನಡೆದುಕೊಳ್ಳಬೇಕು? ಮುಂತಾದ ವಿಷಯಗಳು **ಹೊನ್ನಮ್ಮನ ಹದಿಬದೆಯ ಧರ್ಮದಲ್ಲಿ** ಬಹು ಸರಸವಾಗಿವೆ.

ಹೊನ್ನಮ್ಮನ ಸಾಹಿತ್ಯ ವಿಮರ್ಶೆಯೂ, ಕಾವ್ಯಶಕ್ತಿಯೂ, ಕನ್ನಡದ ಸೊಬಗು, ಸುಲಭವಾದ ಮಾತುಗಾರಿಕೆಯು, ಆಕೆಯ ಕವನದಲ್ಲಿ ತುಂಬಿ ತುಳುಕುತ್ತಿವೆ. ಇದೂ ಅಲ್ಲದೆ ಹೊನ್ನಮ್ಮನು ಪುರಾಣ ಸಂಸ್ಕಾರಗಳಲ್ಲಿ ಅವಿತುಕೊಂಡ, ಸಾಮಾಜಿಕ ಅನ್ಯಾಯವನ್ನು ನಿಷೇಧಿಸುವ, ನೈಜ ನಾರೀ ಜೀವನದ ನ್ಯಾಯವಾದಿನಿಯ ಸಾತ್ವಿಕ ಮೂರ್ತಿಯನ್ನು, ನಾವೀ ಗ್ರಂಥದ

ಕೆಲ ಭಾಗದಲ್ಲಿ ಕಾಣಬಹುದು. ಕೆಲ ಕಾಲದಿಂದ ನಮ್ಮಲ್ಲಿ ನಟ್ಟು ಬಂದ ಹೆಣ್ಣನ್ನು, ಹೀನವಾಗಿ ಎಣಿಸುವ, ದುಷ್ಟವಾದ ರೂಢಿಯನ್ನು ಆಕ್ಷೇಪಿಸುತ್ತಾ ಹೊನ್ನಮ್ಮನು ಸಾರಿದ ಗಂಭೀರವಾದ ಕವನಗಳನ್ನು ಇಲ್ಲಿ ಕೇಳಿರಿ.

**ಪೆಣ್ಣಲ್ಲವೆ ತಮ್ಮನ್ನೆಲ್ಲ ಪಡೆದತಾಯಿ । ಪೆಣ್ಣಲ್ಲವೆ ಪೊರೆದವಳು ।**
**ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು । ಕಣ್ಣು ಕಾಣದ ಗಾವಿಲರು ।**

ಎಂಬ ಮೃದವಾದ ಮಾತಿನಿಂದ ಧೈರ್ಯವಾಗಿ ಖಂಡಿಸಿ ನುಡಿದಿರುವ ವಿವೇಕವನ್ನೂ ವಿಮರ್ಶ ಬುದ್ಧಿಯನ್ನೂ ನೋಡಿರಿ.

ಈ ಮೇರೆಗೆ ವಿದ್ಯಾವತಿಯೂ ಪ್ರತಿಭಾವತಿಯೂ ಆದ ಹೊನ್ನಮ್ಮನು ಈ ಕೃತಿಯನ್ನು ರಚಿಸಿ; ಅರಮನೆಯಲ್ಲಿಯೂ ಆಸ್ಥಾನದಲ್ಲಿಯೂ ವಿಶೇಷ ವಾದ ಗೌರವವನ್ನು ಪಡೆದಳು. ಅರಸು ಮನ್ನಣೆಯೊಂದಿಗೆ ಈಕೆಯ ಸ್ಥಿತಿವಂತಿಕೆಯು ಹೆಚ್ಚಿತು. ಈಕೆಯು ತನ್ನ ಬಾಂಧವರಿಗೆ ಅನೇಕ ವಿಧವಾದ ಉಪಕಾರಗಳನ್ನು ಮಾಡಿ ಕೀರ್ತಿಭಾಜನಳಾದಳು.

ಹೊನ್ನಮ್ಮನು ಅನಾಥಳಾದರೂ ಅಂತಃಶಕ್ತಿಯಿಂದ ಮುಂದೆ ಬಂದು, ಸಾಹಿತ್ಯ ಸಾಮ್ರಾಜ್ಯದಲ್ಲಿ ಕನ್ನಡ ಮಹಿಳೆಯರಿಗೆ ಅಲಂಕಾರ ಪ್ರಾಯ ಳಾದಳು. ಹೊನ್ನಮ್ಮನ ಉಪದೇಶದ ಮಾತುಗಳು ಹೆಣ್ಣುಮಕ್ಕಳಿಗೆ ಅಚ್ಚಹೊನ್ನಿನಂತಿವೆ.

---

# ವಾಗ್ದೇವಿ ಕಂತಿ

## ( ೧೧೭೦ )



ದ್ವಾರ ಸಮುದ್ರದ ವೀರಬಲ್ಲಾಳರಾಯನ ( ವಿಷ್ಣುವರ್ಧನನ ) ಸಭೆಯಲ್ಲಿ **ಕಂತಿಯೆಂಬ** ಒಬ್ಬ ಜೈನ ಹೆಂಗಳೆಯು ಪಂಡಿತೆಯಾಗಿದ್ದಳು. ಕನ್ನಡದಲ್ಲಿ ಕವಿತ್ವ ಮಾಡಿರುವ ಹೆಂಗಳೆಯರಲ್ಲಿ ಈಕೆ ಮೊದಲನೆಯವಳು. ಈಕೆಯ ಕಾವ್ಯಶಕ್ತಿಯು ಮಹಾ ಪ್ರಬಲವಾದುದು. ಆ ಕಾಲದಲ್ಲಿ ಇನ್ನೊಬ್ಬ ಜೈನ ಕವಿಯು ಹೊಯ್ಸಳ ರಾಜ ಸಭೆಯಲ್ಲಿ ವಿರಾಜಿಸುತ್ತಿದ್ದನು. ಆತನನ್ನು **ನಾಗಚಂದ್ರ** ಅಥವಾ **ಅಭಿನವ ಪಂಪ** ಯೆಂದು ಕರೆಯುತ್ತಿದ್ದರು. ಈತನು ಸರಸವಾದ ಜೈನ ಪುರಾಣಗಳನ್ನು ಬರೆದಿದ್ದಾನೆ.

ಈತನಿಗೂ ಕಂತಿಗೂ ಕಾವ್ಯರಚನೆಯಲ್ಲಿ ಆಗಾಗ ಸ್ಪರ್ಧೆಯು ನಡೆಯುತ್ತಿತ್ತು. ಇಂತಹ ಸಂದರ್ಭಗಳಲ್ಲಿ ಕಂತಿಯು ಪಂಪನಿಗೆ ಸೋಲುತ್ತಿರಲಿಲ್ಲ. "ನಿನ್ನದೇನು ಹಿರಿಮೆ ?" ಎಂದು ಆಕೆಯು ಪಂಪನನ್ನು ಪ್ರತಿಭಟಿಸುತ್ತಿದ್ದಳು ಇವರಲ್ಲಿ ಕೆಲವು ಸಲ ಸಮಸ್ಯಪೂರ್ತಿಯ ಪ್ರಸಂಗಗಳು ಏರ್ಪಡುತ್ತಿದ್ದವು.

**ಪಂಪನು ಒಮ್ಮೆ ಕಂತಿಗೆ ಹೀಗೆ ಸಮಸ್ಯೆಯನ್ನು ಕೊಟ್ಟನು :-**

**............ದನವಂ ಕಡಿ ಕಡಿದು ಬಸದಿ ಗೆಳೆಯುತಿರ್ದರ್, ॥**

ಈ ಪದ್ಯದ ಮೊದಲಿನ ಮೂರು ಪಾದಗಳನ್ನು ಹೇಳಿ, ಕಂತಿಯು ಸಮಸ್ಯೆಯನ್ನು ಪೂರ್ತಿಗೊಳಿಸಿದಳು. ಅದು ಹೀಗೆ :—

**ವನದೊಳಗೆ ಪುಟ್ಟಿ ಬೆಳೆಯುತೆ ।**
**ತನಿ ಗಂಪಂ ಪೆತ್ತು ದೆಸೆಗೆ ಬೀರುತಿರ್ಪಾ ।**
**ಘನತರ ಸುರಚಿರ ಮಪ್ಪಸಚ್ಚಂ ।**
**ದನವಂ ಕಡಿ ಕಡಿದು ಬಸದಿ ಗೆಳೆಯುತ್ತಿರ್ದರ್ ।**

ಒಮ್ಮೆ ಕಂತಿಯು ಪಂಪನಿಗೆ ಕೇಳಿದ ಪ್ರಶ್ನೆಯಿದು:—

ಕಡೆದೊಡೆಯಲ್ ಹರನಾಮಂ ।
ನಡುದೊಡೆಯಲ್ ಹವಿಯನಾಮಂ ಮಾದ್ಯಕ್ಷರಮಂ ।
ತೊಡೆಯಲ್ಕೆ ರವಿಯನಾಮಂ ।
ಕಡೆಯಿಂದೋದಲ್ಕೆ ವಿರಹ ಕೇಳಲೆ ಪಂಪಾ ॥

(ಹರವಿ)

ಕಂತಿಯ ಪ್ರತಿಭೆಯನ್ನೂ ಕವಿತಾ ವೈಖರಿಯನ್ನೂ ನೋಡಿ, ಪಂಪನು ಕಾತರನಾಗುತ್ತಿದ್ದನು. ತನ್ನ ಕವಿತೆಯನ್ನು ಆಕೆಯು ಮೆಚ್ಚಬೇಕು. ಮೆಚ್ಚಿ ಹೊಗಳಬೇಕು. ಎಂದು ಆತನು ಎಷ್ಟು ಪ್ರಯತ್ನ ಪಟ್ಟರೂ ಅದು ಸಫಲ ವಾಗುತ್ತಿರಲಿಲ್ಲ. ಕಂತಿಗಾದರೂ ಪಂಪನ ಬಗೆಗೆ ಒಳಗೊಳಗೆ ತುಂಬಾ ಆದರ ಭಾವವಿದ್ದಿತು. ಆದರೆ ಹಠವಾದಿಯಾದ ಆಕೆಯು ಬಹಿರಂಗವಾಗಿ ಪಂಪನ ಕವಿತೆಯನ್ನು ಹೊಗಳುತ್ತಿರಲಿಲ್ಲ ಇದಕ್ಕಾಗಿ ಪಂಪನು ತಳಮಳಿ ಸುತ್ತಿದ್ದನು. ತನ್ನ ಪ್ರತಿಸ್ಪರ್ಧಿಯಾದ ಕಂತಿಯಿಂದ ಹೊಗಳಿಸಿಕೊಂಡು ಹೆಮ್ಮೆ ಪಡಬೇಕೆಂಬುದು ಆತನ ಹಿರಿದಾದ ಹಂಬಲ. ಈ ವಿಷಯವಾಗಿ ಒಮ್ಮೆ ಆತನು ಕಂತಿಯ ಮುಂದೆ ಪಂಥ ತೊಟ್ಟನು.

ಆದಕ್ಕಾಗಿ ಪಂಪನು ಒಂದು ಹಂಚಿಕೆಯನ್ನು ಬಗೆದನು. ಕೆಲವು ದಿವಸಗಳ ಮೇಲೆ ತಾನು ಬೇನೆಯಿಂದ ಬಳಲುತ್ತಿರುವಂತೆ ನಟಿಸಿ, ಸತು ಹೋದನೆಂಬ ಸುಳ್ಳು ಸುದ್ದಿಯನ್ನು ಹರಡಿಸಿದನು. ಇದನ್ನು ಕೇಳಿ ಕಂತಿಯು ಮರಮರನೆ ಮರುಗಿ ಆತನಲ್ಲಿಗೆ ಓಡಿ ಹೋಗಿ ಆತನ ಗುಣಗಳನ್ನೂ, ಕವಿತೆ ಗಳನ್ನೂ ವರ್ಣನಮಾಡಿ ಪ್ರಲಾಪಿಸಿದ ವಿಚಿತ್ರವು ಇಲ್ಲಿ ವರ್ಣಿಸಲಾಗಿದೆ.

## ಕಂತಿಯ ಪ್ರಲಾಪ !

**"ಅಯ್ಯೋ, ಪಂಪಾ! ಕವಿತಾ ಮನೋಹರಾ! ಸಾಹಿತ್ಯ ವಿದ್ಯಾಧರಾ! ಭಾರತಿ ಕರ್ಣಪೂರಾ! ನೀನು ಸತ್ತು ಹೋದೆಯಾ? ನನ್ನನ್ನು ಬಿಟ್ಟು ಹೋದೆಯಾ?**

ಕವಿರಾಯ, ಕವಿ ಪಿತಾಮಹ, ಕವಿ ಕಂಠಾಭರಣ,
ಕವಿ ಶಿಖಾಮಣಿ, ಭಾಪುರೆ! ..................
ಕವಿ ಚಕ್ರೇಶಂಗೆ ಸಾವು ಸಮೆನಿಸಿತಕಟಾ!

ಇನ್ನೇಕೆ? ದೋರನೋಲಗಂ,
ಇನ್ನೇಕೆ? ಕವಿತ್ವವಾದ ತರ್ಕ-ಸಮಸ್ತಂ!
ಇನ್ನೇಕೆ? ಕವಿತಾ ಬಲ್ವಿಚಾರಂ!
ಚನ್ನಿಗ ಕವಿ ಪಂಪರಾಜಂ ಅಳಿದ ಬಳಿಕಂ॥

ಯೆಂದು ಕಂತಿಯು ಪಂಪನ ಮುಂದೆ ಕುಳಿತು ಹಾಡಿ ಹಾಡಿಕೊಂಡು ಅಳ ತೊಡಗಿದಳು. ಆಗ ಪಂಪನು ದಿಗ್ಗನೆ ಎದ್ದು ಕುಳಿತು "ನಿನ್ನಿಂದ ಹೊಗ ಳಿಸಿಕೊಂಡು ಪಂಥವನ್ನು ಗೆದ್ದೆನು" ಎಂದು ನುಡಿದು ಚಪ್ಪಾಳೆಯನ್ನಿಕ್ಕಿ ಅಟ್ಟಹಾಸದಿಂದ ನಗಲಾರಂಭಿಸಿದನು.

ಇದನ್ನು ನೋಡಿ ಕಂತಿಯು ಬೆರಗಾಗಿ ಪಂಪನ ಪಾಂಡಿತ್ಯದ ಹಿರಿಮೆ ಯನ್ನೂ, ಅಲ್ಲಿಯ ವರೆಗೆ ಮುಚ್ಚಿಟ್ಟ ತನ್ನ ಅಭಿಮಾನವನ್ನೂ ಒಪ್ಪಿಕೊಂಡು, ಇಬ್ಬರೂ ಆಸ್ಥಾನದಲ್ಲಿ ಸರಿಸಮಾನರಾಗಿ ವಿರಾಜಿಸುತ್ತಿದ್ದರು.

**ಆಸ್ಥಾನದ ಬಾಹುಬಲಿಯೆಂಬ ಕವಿಯು ಕಂತಿದೇವಿಯನ್ನು ವರ್ಣಿಸಿದ ಪದ್ಯವು ಹೀಗಿರುವದು :—**

ವಿಬುಧ ಜನಸ್ತುತ ಶ್ರೀ ವೀರ ಧೋರನ!
ಸಭೆಗೆ ಮಂಗಳ ಲಕ್ಷ್ಮಿಯೆನಿಪ!
ಶುಭಗುಣ ಚರಿತೆ ಕಂತಿದೇವಿಯು ಪೊಗಳ್ವೆ!
ನಭಿನವ ವಾಗ್ದೇವಿಯ ನಾ॥

ಈಕೆಯು ದೋರರಾಯನ ಸಭೆಗೆ '**ಮಂಗಲ ಲಕ್ಷ್ಮಿ**' ಯಾಗಿದ್ದಳೆಂದು ಹೇಳಿ ರುವನಲ್ಲದೆ, ಈಕೆಯು '**ಅಭಿನವ ವಾಗ್ದೇವಿ**' ಎಂದು ಸಂಬೋಧಿಸಿರುವನು. ಇದನ್ನು ನೋಡಿದರೆ ಈಕೆಯ ಕವಿತಾ ಪ್ರೌಢಿಮೆಯು ಎಷ್ಟು ಶ್ರೇಷ್ಠವಾಗಿ ರಬೇಕು? ಎಂದು ಊಹಿಸಬಹುದಾಗಿದೆ. ಆದರೆ ದುರ್ದೈವದಿಂದ ಬಿಡಿ ಯಾದ ಕೆಲವು ಪದ್ಯಗಳಲ್ಲದೆ ಈಕೆಯು ರಚಿಸಿದ ಕಾವ್ಯಗಳಾವೂ ದೊರೆತಿಲ್ಲ.

ಅಂತು ಕಂತಿಯು '**ಕವೀಶ್ವರಿ**' ಎನಿಸಿಕೊಂಡು ಬಾಳಿದಳು ಕನ್ನಡ ಮಹಿಳೆಯರಲ್ಲಿ.

---

# ಶೃಂಗೇರಿ ಶ್ರೀ ಶಾರದಾಂಬಾ

( ೮೦೦ )



ಈ ಮಹಿಮಳು ಶೋಣಾ ನದಿಯ ತೀರದಲ್ಲಿರುವ ಮಾಹಿಷ್ಮತಿಯೆಂಬ ಪಟ್ಟಣದ ವಿಷ್ಣುಮಿತ್ರನೆಂಬ ಒಬ್ಬ ಬ್ರಾಹ್ಮಣನ ಮಗಳು. ಈಕೆಯ ಮೊದಲನೆಯ ಹೆಸರು ಉಭಯ ಭಾರತಿ. ಈಕೆಯು ಚಿಕ್ಕಂದಿನಲ್ಲಿಯೆ ವೇದ, ಶಾಸ್ತ್ರ, ಪುರಾಣ–ಸಾಹಿತ್ಯ, ನಾಟಕ, ಮುಂತಾದ ವಿದ್ಯೆಗಳನ್ನು ಪರಿಶೀಲಿಸಿ ಪಾರಂಗತಳಾಗಿದ್ದಳು. ಈಕೆಯ ವಿದ್ಯಾವೈಭವವನ್ನು ನೋಡಿ ಜನರು ಬೆರಗಾಗಿ, ಈಕೆಯು ಸರಸ್ವತಿಯ ಅವತಾರವೆಂದು ತಿಳಿದಿದ್ದರು. ಮುಂದೆ ಈಕೆಯು ಮಂಡನ ಪಂಡಿತನೆಂಬ ಕವಿಯ ಅರ್ಧಾಂಗಿಯಾದಳು.

ಈ ಪಂಡಿತ ದಂಪತಿಗಳ ಮನೆಯಲ್ಲಿ ಪಂಜರದೊಳಗಿನ ಗಿಳಿಗಳೂ ಸಹಾ ಶಾಸ್ತ್ರಾರ್ಥ ಮಾಡುತ್ತಿದ್ದವಂತೆ, ವಾದವಿವಾದ ನಡೆಸುತ್ತಿದ್ದವಂತೆ. ಇಂಥ ಘನ ಪಂಡಿತ ಪ್ರವರರನ್ನು ವಾದದಲ್ಲಿ ಸೋಲಿಸಿ, ತಮ್ಮ ಶಿಷ್ಯನನ್ನು ಮಾಡಿಕೊಂಡರೆ, ಈತನಿಂದ ತಮ್ಮ ಮತಕ್ಕೆ ಬಲವಾದ ಆಧಾರವು ದೊರೆಯುವದೆಂದು, ಶ್ರೀ ಭಗವಾನ್ ಶಂಕರಾಚಾರ್ಯರು ಮಂಡನ ಪಂಡಿತನ ಮನೆಗೆ ಬಂದರು.

ವೇದಗಳು ವಿಧಿಸುವ ಯಜ್ಞಯಾಗಾದಿ ಕರ್ಮಗಳನ್ನು ಮಾಡುವದೇ ಬಾಳಿನ ಗುರಿಯೆಂದು ಪಂಡಿತರ ಮತ. ಜ್ಞಾನವು ಕರ್ಮಕ್ಕಿಂತಲೂ ಮಿಗಿಲಾದುದು. ಅದರಿಂದಲೇ ಮಾನವನ ಉದ್ಧಾರ ಎಂದು ಆಚಾರ್ಯರ ಮತ. ಪಂಡಿತರದು ದ್ವೈತಮತ. ಆಚಾರ್ಯರದು ಅದ್ವೈತಮತ. ಹೀಗೆ ಒಬ್ಬರಿಗೊಬ್ಬರು ಅದು ಹೆಚ್ಚು, ಇದು ಹೆಚ್ಚು, ಎಂದು ಮಾತಿನ ಮಲ್ಲಯುದ್ಧಕ್ಕೆ ಅಣಿಯಾದರು.

ಇಂತಹ ವಾದದಲ್ಲಿ ಸೋಲು ಗೆಲುವಿನ ತೀರ್ಮಾನವನ್ನು ವಿಧಿಸಲು ಮೂರನೆಯರೊಬ್ಬರು, ಅಪಾರ ಬುದ್ಧಿವಂತರಾದ ಇವರ ಮೇಲೆ ನ್ಯಾಯವನ್ನು ಹೇಳಲು ಬೇಕಲ್ಲವೆ? ಬೇರಾರು ಎಲ್ಲಿ ದೊರೆಯಬೇಕು? ಮಹಾ ಮೇಧಾವಿಯೂ ಆದ ನಯವಿನಯ ಶಾಲಿನಿಯೂ ಆದ ವನಿತೆ, ಮಂಡನ ಪಂಡಿತನ ಅರ್ಧಾಂಗಿ ಉಭಯ ಭಾರತಿಯಿದ್ದಳು.



ಶೃಂಗೇರಿ ಶ್ರೀ ಶಾರದಾಂಬಾ

ಮಂಡನ ಪಂಡಿತನೂ ಶ್ರೀ ಶಂಕರಾಚಾರ್ಯರೂ ಈಕೆಯ ಅಧ್ಯಕ್ಷ ಪದವಿಯನ್ನು ಒಪ್ಪಿಕೊಂಡರು. ಗಹನ ಗಂಭೀರವಾದ ವಾದವು ಮತ್ತೆ ಸುರುವಾಯಿತು. ಖಂಡನ ಮಂಡನಗಳ ಕಿಡಿಗಳು ಹಾರತೊಡಗಿದವು.

ಒಂದೆಡೆಗೆ ಪಂಡಿತಾಗ್ರೇಸರನಾದ ತನ್ನ ಪ್ರಾಣೇಶ್ವರನು. ಇನ್ನೊಂದೆಡೆಗೆ ಅದ್ವಿತೀಯರಾದ ಶ್ರೀ ಶಂಕರಾಚಾರ್ಯರು. ವಿಷಯಗಳೋ ? ಒಂದೇ ? ಎರಡೆ ? ನಾನಾ ಶಾಸ್ತ್ರ ವೇದಗಳ ತಾಕಲಾಟಗಳು.

ಈ ವಾದದಲ್ಲಿ ತಾವು ಸೋತರೆ, "ಕಾವಿಯು ಬಟ್ಟೆ ಕೈ ಕೋಲನ್ನು ಎಸೆದು ಗೃಹಸ್ಥಾಶ್ರಮವನ್ನು ಸ್ವೀಕರಿಸುವೆನೆಂದು ಶಂಕರರ ಶಪಥ," ಒಂದು ವೇಳೆ ತಾವು ಸೋತರೆ "ಗೃಹಸ್ಥಾಶ್ರಮವನ್ನು ಬಿಟ್ಟು ಸನ್ಯಾಶ್ರಮವನ್ನು ಸ್ವೀಕರಿಸುವೆ" ನೆಂದು ಮಂಡನ ಪಂಡಿತರ ಶಪಥ.

ವಾದವು ಎಡಬಿಡದೆ ಮುಂದುವರಿಯಿತು. ಬಹು ದಿನಗಳು ಕಳೆದರೂ ವಾದವು ಮುಗಿಯಲಿಲ್ಲ. ಮನೆಯ ಯಜಮಾನಿಯಾದ ಉಭಯ ಭಾರತಿಯು ಆಗಾಗ ಮನೆ ಕೆಲಸದ ಕಡೆಗೆ ಗಮನಿಸಬೇಕಾಗುತ್ತಿತ್ತು. ಅದಕ್ಕಾಗಿ ಆಕೆಯು ಈ ವಾದಿಗಳಿಬ್ಬರ ಕೊರಳಲ್ಲಿ ಹೂಮಾಲೆಗಳನ್ನು ಹಾಕಿ, "ಯಾರ ಮಾಲೆಯು ಮೊದಲು ಬಾಡುವದೋ ? ಅವರು ಸೋತವರು" ಎಂಬ ಸಂಕೇತವನ್ನು ಮಾಡಿದಳಂತೆ.

ಕೆಲ ದಿನದ ಮೇಲೆ ಮಂಡನ ಪಂಡಿತನ ಕೊರಳಮಾಲೆಯು ಬಾಡಿತು. ಬಳಿಕ ಉಭಯ ಭಾರತಿಯು, ಶಂಕರರನ್ನು ಕುರಿತು ನುಡಿದಳು. "ಯತಿವರರೇ, ಮಂಡನ ಮಿಶ್ರರು ಇನ್ನೂ ಪೂರ್ತಿಯಾಗಿ ಸೋತಿಲ್ಲ. ಅವರ ಅರ್ಧಾಂಗಿಯಾದ ನಾನು ಸೋಲದಿರಲು ಅವರಿಗೆ ಸೋಲು ಎಂತು ? ಇನ್ನು ನನ್ನೊಡನೆ ವಾದವಾಗಲಿ ಎಂದಳು.

ಅದಕ್ಕೆ ಶಂಕರಾಚಾರ್ಯರು ಇದೇನು ಸಂದರ್ಭ ? ಮಾನವಂತರಾದ ಪುರುಷರು ಹೆಂಗಳೆಯರ ಬಾಯಿಗೆ ಹತ್ತಲೆಳಸುವರೆ ? ಎನ್ನಲು, ಅದಕ್ಕೆ ಉಭಯ ಭಾರತಿಯು ಉತ್ತರಿಸಿದಳು. ಮಹಾನುಭಾವರೇ ! ಇಲ್ಲಿ ಹೆಣ್ಣು ಗಂಡಿನ ಎಣಿಕೆಯು ಅಪ್ರಸ್ತುತ, ಹಿಂದೆ ಯಾಜ್ಞ್ಯವಲ್ಕ ಋಷಿಗಳು ಗಾರ್ಗಿಯೊಡನೆ ಚರ್ಚಿಸಲಿಲ್ಲವೆ ? ಜನಕರಾಜನು ಸುಲಭೆಯೊಂದಿಗೆ ವಾದಿಸಲಿಲ್ಲವೆ ? ಎಂದಳು.

ಈ ಮಾತುಗಳನ್ನು ಶಂಕರಾಚಾರ್ಯರು ಕೇಳಿ ಅವಕ್ಕಾದರು. ಆಗ ಉಭಯ ಭಾರತಿಯು "ಶಂಕರರು ಬಾಲ ಸನ್ಯಾಸಿಗಳು, ಅವರಿಗೆ ಗೃಹಸ್ಥ

ಶ್ರಮದ ಅನುಭವವಿಲ್ಲ. ಶೃಂಗಾರ ಶಾಸ್ತ್ರದ ಒಂದು ಸಮಸ್ಯೆಯನ್ನು ಅವರ ಮೇಲೆ ಎರಚಿದರಾಯಿತು. ಕೆಲಸವು ಗೆದ್ದು ಹೋಗುವದು. ಎಂದು ಯೋಚಿಸಿ, "ಮುನಿ ಪುಂಗವರೆ, ಮನ್ಮಥನಿಗೆ ಕಲೆಗಳೆಷ್ಟು? ಅವುಗಳ ಲಕ್ಷಣವೇನು? ಶುಕ್ಲ ಪಕ್ಷದಲ್ಲಿ ಅವುಗಳ ಸ್ಥಾನವೆಲ್ಲಿ? ದಯುವಿಟ್ಟು ಈ ಪ್ರಶ್ನೆಗಳಿಗೆ ಉತ್ತರವೀಯಬೇಕು" ಎಂದಳು.

ಕೆಲಹೊತ್ತು ಶಂಕರರು ಯೋಚಿಸಿ "ಇದಕ್ಕೆ ಉತ್ತರ ಹೇಳಲು ಒಂದು ತಿಂಗಳ ಅವಧಿಯನ್ನು ಕೊಡಬೇಕು ಎಂದರು. ಉಭಯ ಭಾರತಿಯು ಅದಕ್ಕೆ ಆಗಲೆಂದು ಒಪ್ಪಿಕೊಂಡಳು. ಬಳಿಕ ಶಂಕರಾಚಾರ್ಯರು ಕಾಮ ಶಾಸ್ತ್ರದ ಅನುಭವವನ್ನು ಪಡೆದುಕೊಂಡು ಬಂದು ಹೇಳಿದರು. ಆಗ ಉಭಯ ಭಾರತಿಯು ಶಂಕರರ ಸರ್ವಜ್ಞತೆಯನ್ನು ಒಡಂಬಟ್ಟು, ಪತಿಪತ್ನಿಯರಿಬ್ಬರೂ ಶಂಕರಾಚಾರ್ಯರ ಶಿಷ್ಯರಾದರು.

ಪೂರ್ವ ಪ್ರತಿಜ್ಞೆಯಂತೆ ಮಂಡನ ಮಿಶ್ರರು ಸನ್ಯಾಸವನ್ನು ಸ್ವೀಕರಿಸಿದರು. ಅಂದಿನಿಂದ ಅವರಿಗೆ ಸುರೇಶ್ವರಾಚಾರ್ಯರೆಂಬ ಹೆಸರು ಬಂತು. ಅವರು ಶೃಂಗೇರಿಯ ಪೀಠವನ್ನು ಅಲಂಕರಿಸಿ ಜಗದ್ಗುರುಗಳೆನಿಸಿದರು. ಉಭಯ ಭಾರತಿಯು ಶಂಕರರ ಮಠದಲ್ಲಿ ವಾಸ ಮಾಡಿದಳು. ವಿದ್ವನ್ಮಂಡಲಿಯಲ್ಲಿ ಸೇರಿ ಶಂಕರರ ಮತಪ್ರಸಾರ ಮಾಡಿದಳು.

ಈ ಉಪಕಾರದ ಸ್ಮಾರಕವಾಗಿಯೂ, ಈಕೆಯ ಗುಣ ವಿದ್ಯೆಯ ಹೆಚ್ಚಳಕ್ಕಾಗಿಯೂ, ಶಂಕರಾಚಾರ್ಯರು ಶೃಂಗೇರಿಯಲ್ಲಿ ಆಕೆಯ ದೈವೀ ಸ್ವರೂಪವನ್ನು ಸೂಚಿಸುವ, **ಶಾರದಾಂಬೆ** ಯೆಂಬ ಹೆಸರಿನ ಮಂದಿರವನ್ನು ಕಟ್ಟಿಸಿದರು. ಅಂದಿನಿಂದ ಉಭಯ ಭಾರತಿಯು "**ಶಾರದೆ**" ಅಥವಾ **ಸರಸ್ವತಿ** ಸ್ವರೂಪದಿಂದ ಶಂಕರಾಚಾರ್ಯರ ಮಠದಲ್ಲಿ ಸ್ಥಿರವಾಗಿ ವಾಸ ಮಾಡಿರುವಳೆಂದು ನಂಬುಗೆಯಿದೆ

ಈ ಮೇರೆಗೆ ಉಭಯ ಭಾರತಿಯು ಅಮರ ಕೋಟೆಯನ್ನು ಏರಿ, ಅಮೃತತ್ವವನ್ನು ಪಡೆದಳು. ಈಗಲೂ ಮಠದಲ್ಲಿ ಉಭಯ ಭಾರತಿಯ ಪೂಜೆಯು **ಶಾರದಾಂಬಾ** ಎಂಬ ಹೆಸರಿನಿಂದ ನಡೆಯುತ್ತಲಿದೆ.

---

# ಸೀತಾದೇವಿ



ಈ ಮಹಾ ಸಾಧ್ವಿಮಣಿಯು ಜನಕರಾಜನ ಮಗಳು. ಶ್ರೀ ರಾಮನ ಧರ್ಮ ಪತ್ನಿಯು. ಈಕೆಯು ಪಟ್ಟ ಕಷ್ಟ ಅಷ್ಟಿಷ್ಟೆಂದು ಹೇಳಲು ಅಸಾಧ್ಯ. ದೊರೆಯ ಹೆಂಡತಿಯಾದರೂ ಬಡವನ ಹೆಂಡತಿಗಿಂತಲೂ ಕಡೆಯಾಗಿ ಕಷ್ಟವನ್ನು ಅನುಭವಿಸಿದವಳು.

ಶ್ರೀ ರಾಮನು ತನ್ನ ಚಿಕ್ಕಮ್ಮನ ಮಾತನ್ನು ನೆರವೇರಿಸಲೋಸುಗ ಅಡವಿಗೆ ಹೊರಟನು. ಸೀತೆಯು ತಾನೂ ಬರುವೆನೆಂದು ಗಂಡನ ಬೆನ್ನು ಹತ್ತಿದಳು. "ನೀನು ಬರಬೇಡ. ಅರಮನೆಯಲ್ಲಿ ಸುಖವಾಗಿ ಬೆಳೆದವಳು. ಅಡವಿಯಲ್ಲಿ ಆ ಕಷ್ಟವನ್ನು ತಾಳಲಾರೆಯೆಂದು ಪರಿಪರಿಯಿಂದ ಹೇಳಿದರೂ ಕೇಳಲಿಲ್ಲ. ಪತಿವ್ರತೆಯರು ಕ್ಷಣ ಕಾಲವಾದರೂ ಪತಿಯನ್ನಗಲಿರಲಾರರು.

ಸೀತೆಯು ಕಲ್ಲು ಮುಳ್ಳುವಿಡಿದ ಕಾಡೊಳಗೆ, ಬಿಸಿಲೆನ್ನದೆ, ಹಸಿವೆನ್ನದೆ, ತೃಷೆಯೆನ್ನದೆ ಮೆಲ್ಮಾತುಗಳನ್ನಾಡುತ್ತಾ, ಪತಿಯ ಹೆಗಲಮೇಲೆ ಕೈಹಾಕಿಕೊಂಡು ನಡೆಯುತ್ತಿದ್ದಳು. ಕಾಲಲ್ಲಿ ಮುಳ್ಳುಗಳು ಮುರಿದಿದ್ದವು. ರಕ್ತವು ಸೋರುತಿತ್ತು. ಬಿಸಲಿಗೆ ಮೋರೆ ಬಾಡಿತ್ತು. ಹಸಿವೆಯಿಂದ ಹೊಟ್ಟೆಯ ಕರುಳು ತಳಮಳಿಸುತ್ತಿದ್ದವು. ಆದರೂ ಸೀತೆ ಪತಿಯ ಮನದಣಿವನಾರೈಯುತ್ತಾ ನಡೆಯುತ್ತಿದ್ದಳು. ಗಂಗಾ ನದಿಯನ್ನು ದಾಟಿ ಮುಂದೆ ಅವರು ಚಿತ್ರಕೂಟಕ್ಕೆ ಬಂದರು. ಅಲ್ಲಿ ಆಶ್ರಮವನ್ನು ಮಾಡಿಕೊಂಡು ಕಾಲವಂ ಕಳೆಯುತ್ತಿರುವಾಗ, ದಂಡಕಾರಣ್ಯದ ರಾಕ್ಷಸರು ರಾಮ ಲಕ್ಷ್ಮಣರಿಗೆ ಬಹಳ ತೊಂದರೆಯನ್ನು ಕೊಡುತ್ತಿದ್ದರು. ಒಂದು ದಿನ ಶೂರ್ಪನಖಿಯೆಂಬ ರಾಕ್ಷಸಿಯು ಬಂದು ಶ್ರೀ ರಾಮನನ್ನು ಮದುವೆ ಮಾಡಿಕೊಳ್ಳೆಂದು ಹಠ ಮಾಡಿದಳು. ಆಗ ಲಕ್ಷ್ಮಣನಿಗೆ ಸಿಟ್ಟು ಬಂದು ಅವಳ ಕಿವಿ ಮೂಗುಗಳನ್ನು ಕೊಯ್ದು ಕಳುಹಿಸಿ ಬಿಟ್ಟನು.

ಅವಳು ಅಳುತ್ತಾ ಲಂಕೆಗೆ ಹೋಗಿ ತನ್ನ ಅಣ್ಣನಾದ ರಾವಣನ ಮುಂದೆ ದೂರು ಹೇಳಿದಳು. “ ಶ್ರೀ ರಾಮನ ಹೆಂಡತಿಯಾದ ಸೀತೆಯುಬಹು ಸುಂದರಿಯು, ಆಕೆಯನ್ನು ತಂದು ನೀನು ಮದುವೆ ಮಾಡಿಕೊ ” ಎಂದಳು.

ಆಗ ಲಂಕಾ ಪಟ್ಟಣಕ್ಕೆ ಒಡೆಯನಾದ ರಾವಣನು ಸೀತೆಯನ್ನು ಕದ್ದೊಯ್ಯಲು ಬಂದನು. ಅವನ ಸಹಾಯಕ್ಕೆ ಮಾರೀಚನೆಂಬ ರಾಕ್ಷಸನನ್ನು ಕರಕೊಂಡು ಬಂದಿದ್ದನು. ಮಾರೀಚನು ಬಂಗಾರ ವರ್ಣದ ಜಿಂಕೆಯಾಗಿ ಸೀತೆಯ ಮುಂದೆ ಸುಳಿದಾಡಿದನು. ಸೀತೆಗೆ ಆ ಮೋಸ ತಿಳಿಯಲಿಲ್ಲ. ಆ



ಮೃಗವನ್ನು ತಂದು ಕೊಡೆಂದು ಶ್ರೀ ರಾಮನನ್ನು ಕೇಳಿದಳು. ಶ್ರೀ ರಾಮನು ಅದನ್ನು ಹಿಡಿಯುವದಕ್ಕೆ ಹೊರಟ. ಆ ಜಿಂಕೆ ಕೈಗೆ ಸಿಕ್ಕದೆ ಬಹುದೂರ ಶ್ರೀರಾಮನನ್ನು ಕರದುಕೊಂಡು ಹೋಯಿತು. ಕಡೆಗೆ ಶ್ರೀ ರಾಮನು ಸಿಟ್ಟಿಗೆದ್ದು ಬಾಣವನ್ನು ಬಿಟ್ಟು ಅದನ್ನು ಕೊಂದನು. ಆಗ ಮಾರೀಚನು ಶ್ರೀರಾಮನ ಧ್ವನಿಯಂತೆ ಹಾ ಸೀತೆ ! ಹಾ ಲಕ್ಷ್ಮಣಾ ! ಎಂದು ಒದರುತ್ತಾ ಪ್ರಾಣ ಬಿಟ್ಟನು.

ಆ ಧ್ವನಿಯನ್ನು ಕೇಳಿದ ಸೀತೆಯು ಶ್ರೀ ರಾಮನಿಗೇನಾಯಿತೋ ? ಎಂದು ಹೆದರಿ, ಶ್ರೀ ಲಕ್ಷ್ಮಣನನ್ನು ಜಾಗ್ರತೆ ಹೋಗಲು ತಿಳಿಸಿದಳು. “ ತಾಯೀ, ಶ್ರೀರಾಮನಿಗೇತರ ಭಯ ? ಅವನು ಸುರಕ್ಷಿತವಾಗಿದ್ದಾನೆ. ಇದು ರಾಕ್ಷಸರ ಮಾಯಾ ತಂತ್ರವೆನ್ನಲು” ಸೀತೆಯು ಸಿಟ್ಟಿಗೆದ್ದು ಲಕ್ಷ್ಮಣನನ್ನು ಹೋಗಗೊಟ್ಟಳು. ಲಕ್ಷ್ಮಣನು ಹೋಗುವಾಗ ಆಕೆಯ ಸುತ್ತಲೂ ಗೆರೆಯನ್ನು ಬರೆದು, ಈ ಗೆರೆಯನ್ನು ದಾಟಿ ಹೋಗಬೇಡ ನಾವು ಬರುವವರೆಗೆಂದನು.

ಹೀಗೆ ರಾಮ ಲಕ್ಷ್ಮಣರಿಬ್ಬರೂ ಮರೆಯಾಗಲು ರಾವಣನು ಸಾಧು ವೇಷದಿಂದ ಬಂದು ಭಿಕ್ಷೆಯನ್ನು ಬೇಡಿದನು. ಸೀತೆಯು ಭಿಕ್ಷೆಯನ್ನು ತಂದು ನೀಡಿದಳು. ಚಿಂತೆಗೊಳಗಾದ ಸೀತೆಯ ಮುಖವನ್ನು ನೋಡಿ ರಾವಣನು ಏಕಮ್ಮಾ! ಚಿಂತೆಗೊಳಗಾಗಿರುವೆ ಎಂದನು. ಆ ವೇಷಧಾರಿಯಾದ ರಾವಣನನ್ನು ಮಹಾ ಸಾಧುವೆಂದರಿತು, ಸೀತೆಯು :– ಎಲೌ ಸಾಧುವೇ, ನನ್ನ ಪತಿಯು ಕ್ಷೇಮದಿಂದಿರುವರೇ ? ಹೇಳಬೇಕೆಂದರುಹಿದಳು. ಅಮ್ಮಾ! ರಾಮ ಲಕ್ಷಣರೀರ್ವರೂ ಬಹು ಗಂಡಾಂತರದಲ್ಲಿದ್ದಾರೆ. ನಾನು ಆ ಮಾರ್ಗದಲ್ಲಿ ಬರುತ್ತಿರುವಾಗ, ತಮ್ಮನ್ನು ಬರಹೇಳಲು ನನಗೆ ತಿಳಿಸಿದರೆನ್ನಲು, ಸೀತೆಯು ಘಾಬರಿಯಾಗಿ ಹೊರಟಳು. ಆಗ ವೇಷಧಾರಿಯಾದ ರಾವಣನು ಅಮ್ಮಾ, ಅವರು ಬಹು ದೂರದಲ್ಲಿರುವರು. ಕಾಲುನಡಿಗೆಯಿಂದ ಜಾಗ್ರತೆ ಹೋಗಲಾರೆ. ಈ ನಮ್ಮ ಪುಷ್ಪಕ ವಿಮಾನದಲ್ಲಿ ಕುಳಿತುಕೊ. ನಾನು ಜಾಗ್ರತೆಯಾಗಿ ಕರಕೊಂಡು ಹೋಗಿ ನಿಮ್ಮನ್ನು ಮುಟ್ಟಿಸುವೆನೆನ್ನಲು, ಘಾಬರಿಗೊಂಡ ಸೀತೆಯು ಏನೊಂದು ವಿಚಾರ ಮಾಡದೆ ರಾವಣನ ಪುಷ್ಪಕ ವಿಮಾನದಲ್ಲಿ ಹೋಗಿ ಕುಳಿತಳು.

ಕೂಡಲೆ ಆ ಮಾಯಾವಿಯು ತನ್ನ ವೇಷ ಬದಲಾಯಿಸಿ ಲಂಕಾ ಪಟ್ಟಣದ ಹಾದಿ ಹಿಡಿದನು. ಸೀತೆಯು ರಾವಣನನ್ನು ನೋಡಿ ಅಂಜಿ ಚಿಟ್ಟನೆ ಚೀರಿದಳು. ಹಾ ರಾಮಾ! ಹಾ ಲಕ್ಷ್ಮಣಾ! ಎಂದು ಗೋಳಿಟ್ಟಳು. ಕಣ್ಣೀರನ್ನು ಸುರಿಸುತ್ತಾ ದಾರಿಯುದ್ದಕ್ಕೆ ನಡೆದಳು. ರಾಮಲಕ್ಷ್ಮಣರು ಮರಳಿ ಬಂದು ನೋಡುವಲ್ಲಿ ಆಶ್ರಮದಲ್ಲಿ ಸೀತೆಯಿದ್ದಿಲ್ಲ ಅದನ್ನು ಕಂಡು ಮರಮರನೆ ಮರುಗಿದರು. ಆಕೆಯನ್ನು ಹುಡುಕಲು ಹೊರಟರು.

ಆಗ ದಾರಿಯಲ್ಲಿ ಶ್ರೀರಾಮನ ಭಕ್ತನಾದ ಜಟಾಯುವೆಂಬ ಪಕ್ಷಿಯು, ಸೀತಾಮಾತೆಯು ಆರ್ತ ಧ್ವನಿಯನ್ನು ಕೇಳಿ ರಾವಣನ ಕೂಡ ಯುದ್ಧವನ್ನು ಮಾಡಿತು. ರಾಮ ಲಕ್ಷಣರು ಆ ಮಾರ್ಗವಾಗಿ ಬರುವ ವರೆಗೂ ಗುಟುಕು ಜೀವದೊಳಗಿದ್ದು, ಅವರಿಗೆ ಆ ವಾರ್ತೆಯನ್ನು ಹೇಳಿ, ರಾಮ ಲಕ್ಷ್ಮಣರ ಪಾದದ ಮೇಲೆ ಬಿದ್ದು ಪ್ರಾಣವಂ ಬಿಟ್ಟಿತು.

ಅತ್ತ ರಾವಣನು ಸೀತೆಯನ್ನು ಒಯ್ದು ತನ್ನ ಅಶೋಕ ವನದಲ್ಲಿಟ್ಟು ಸುತ್ತಲೂ ರಾಕ್ಷಸ ಸ್ತ್ರೀಯರ ಕಾವಲಿಟ್ಟನು. ಆಕೆಯ ಮನ ಒಲಿಸಲು ಪ್ರಯತ್ನ ಪಡುತ್ತಿದ್ದನು. ಸೀತೆಯು ರಾಮನ ಧ್ಯಾನದ ಹೊರ್ತು ಮತ್ತೇನನ್ನೂ ನೆನೆಯುತ್ತಿರಲಿಲ್ಲ. ಇತ್ತ ರಾಮ ಲಕ್ಷ್ಮಣರು ಕಪಿ ಸೈನ್ಯಕ್ಕೆ ಒಡೆಯನಾದ ಹನುಮಂತನನ್ನು ಕಳುಹಿಸಿ, ಸೀತೆಯು ಇರುವ ಸ್ಥಳವನ್ನು ಗೊತ್ತು ಹಚ್ಚಿದರು. ಮುಂದೆ ಕಪಿ ಸೈನ್ಯವನ್ನು ಕಟ್ಟಿಕೊಂಡು, ಲಂಕಾ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿದರು. ರಾವಣನ ಕೂಡ ಯುದ್ಧ ಮಾಡಿ ಅವನನ್ನು ಕೊಂದು ಸೀತೆಯನ್ನು ತಂದರು. ಸೀತೆಯು ಅಶೋಕವನದಲ್ಲಿ ಪಟ್ಟ ಕಷ್ಟ ವನ್ನು ಕೇಳಿದರೆ ಎಂಥ ಕಲ್ಲೆದೆಯವರಿಗೂ ಮನಸ್ಸು ಹಾಯ್ ಎನ್ನುತ್ತದೆ.

ಈ ಸಂಕಟದಿಂದ ಪಾರಾಗಿ ಸೀತೆಯು ರಾಮನೊಂದಿಗೆ ಆಯೋಧ್ಯೆಗೆ ಬರಲು, ಜನರು "ಸೀತೆಯು ರಾವಣನಲ್ಲಿದ್ದಳು. ಏನೋ? ಎಂತೋ?" ಎಂದು ಗುಜುಗುಜು ಮಾತಾಡಹತ್ತಿದರು. ಈ ಮಾತು ಸೀತಾ ರಾಮರ ಕಿವಿಗೆ ಮುಟ್ಟಿತು. ಆಗ ಶ್ರೀ ರಾಮನು ಅಗ್ನಿ ಕುಂಡವನ್ನು ನಿರ್ಮಿಸಿದನು. ಸೀತೆಯು ಅದರಲ್ಲಿ ಹಾರಿ ಪರಿಶುದ್ಧಳಾಗಿ ಜನರ ಸಂಶಯವನ್ನು ಹೋಗಲಾಡಿಸಿದಳು. ಇತ್ತ ಸುಖದಿಂದಿರುವ ಕಾಲಕ್ಕೆ ಸೀತೆಯು ಗರ್ಭಿಣಿಯಾದಳು. ಆ ಸಂದರ್ಭ ದಲ್ಲಿ ಸೀತೆಗೆ ಮತ್ತೊಂದು ಘೋರವಾದ ವಿಪತ್ತು ಬಂದೊದಗಿತು. "ಬಿಟ್ಟ ಹೆಂಡತಿಯನ್ನು ಆಳಲು ನಾನೇನು ಶ್ರೀ ರಾಮನೇ?" ಎಂದು ಯಾವನೋ ಒಬ್ಬ ಅಗಸನು ನುಡಿದನೆಂಬ ವಾರ್ತೆಯನ್ನು ಕೇಳಿ ರಾಮನು ಕಡುನೊಂದನು. ರಘುಕುಲ ವಂಶಕ್ಕೆ ಕಲಂಕ ಬರಬಾರದೆಂದು ತುಂಬಿದ ಗರ್ಭಿಣಿಯಾದ ಸೀತೆಯನ್ನು ಅಡವಿಗೆ ಕಳುಹಿಸಿದನು. ಅಲ್ಲಿ ಸೀತೆಯು ಘನ ಕಷ್ಟಗಳನ್ನು ಅನುಭವಿಸಿದಳೆಂದು ಬೇರೆ ಹೇಳಬೇಕಾದುದಿಲ್ಲ. ಇದು ಸಹಜವಾಗಿ ಹೆಣ್ಣು

ಮಕ್ಕಳಿಗೆ ಗೊತ್ತಾಗುವದು. ಆಕೆಯ ಕಷ್ಟವನ್ನು ನೋಡಿ ಮೃಗ ಪಕ್ಷಿಗಳೂ ಕೂಡ ಕಣ್ಣೀರಿಟ್ಟವು. ತರುಲತಾದಿಗಳು ಬಾಡಿದವು. ನೈಸರ್ಗಿಕವು ಮೌನತೆಯನ್ನು ತಾಳಿತು.

ಮುಂದೇನು? ವಾಲ್ಮೀಕಿ ಋಷಿಗಳು ಬಂದರು. ಸೀತಾಮಾತೆಗೆ ಭೆಟ್ಟಿಯಾಗಿ ಆಕೆಯ ದುಃಖವನ್ನು ಸಮಾಧಾನ ಪಡಿಸಿ, ತಮ್ಮ ಆಶ್ರಮಕ್ಕೆ ಕರದೊಯ್ದು ಉಪಚರಿಸಿದರು. ಮುಂದೆ ಕೆಲವು ದಿವಸದ ಮೇಲೆ ಸೀತಾಮಾತೆಯು ಲವ ಕುಶರೆಂಬ ಅವಳಿಜವಳಿ ಮಕ್ಕಳನ್ನು ಹೆತ್ತಳು. ಆ ಮಕ್ಕಳಿಗೆ ವಾಲ್ಮೀಕಿ ಋಷಿಗಳೇ ವಿದ್ಯಾ ಬುದ್ಧಿ ಧನುರ್ವಿದ್ಯೆಗಳನ್ನು ಕಲಿಸಿದರು.

ಇತ್ತ ಶ್ರೀರಾಮನು ಸೀತಾ ವ್ಯಸನದಿಂದ ಕೊರಗಿ ನರಳಿದನು. ಆಕೆಯ ಪ್ರತಿಮೆಯೊಂದನ್ನು ಮಾಡಿಸಿ ನಿತ್ಯವು ಆ ಮೂರ್ತಿಯ ಧ್ಯಾನದಲ್ಲಿ ಕಾಲ ಕಳೆದನು. ಮುಂದೆ ಅಶ್ವಮೇಧ ಯಾಗವನ್ನು ಮಾಡಬೇಕೆಂದು ನಿರ್ಧರಿಸಿ ಅಶ್ವದ ಪಣೆಯಲ್ಲಿ ತನ್ನ ಬಿರುದಿನ ನಾಮಾಂಕಿತವನ್ನು ಬರೆದು, ಬಂಗಾರದ ತಗಡನ್ನು ಕಟ್ಟಿ, ಅದರ ಬೆನ್ನಗಾವಲಿಗೆ ಲಕ್ಷ್ಮಣನನ್ನೂ ಕೆಲವು ಸೈನ್ಯವನ್ನೂ ಕಳುಹಿಸಿದನು. ಆ ಕುದುರೆಯು ಅನೇಕ ರಾಜರ ರಾಜ್ಯದ ಮೇಲೆ ಹಾದು ಹೋದರೂ ನಾನಾಯೆಂಬ ಒಬ್ಬ ದೊರೆಗಳೂ ಆ ಕುದುರೆಯನ್ನು ಕಟ್ಟಲಿಲ್ಲ.

ಮುಂದೆ ಆ ಕುದುರೆಯು ವಾಲ್ಮೀಕಿ ಆಶ್ರಮದ ಬಳಿಗೆ ಬಂದಿತು. ಋಷಿಗಳ ಫಲಪುಷ್ಪಾದಿಗಳ ತೋಟಕ್ಕೆ ನುಗ್ಗಿ, ಗಿಡಗಂಟಿಗಳನ್ನು ಕಡಿಕಡಿದು ತೋಟವನ್ನು ಹಾಳು ಮಾಡುತ್ತಿತ್ತು. ಪುಷ್ಪಾದಿಗಳನ್ನು ಎತ್ತಲಿಕ್ಕೆ ಬಂದ ಲವನು ಆ ಕುದುರೆಯನ್ನು ಕಟ್ಟಿ ಹಾಕಿದನು. ಆಗ ಸುಭಟರು ಬಂದು ಕುದುರೆಯನ್ನು ಬಿಡಹೇಳಿದರು. ಬಿಡುವದಿಲ್ಲವೆಂದು ಲವನು ನುಡಿದನು. ಸುಭಟರು ಕುದುರೆಯನ್ನು ಬಿಚ್ಚಲುಹೋದರು. ಲವನು ಬಿಚ್ಚುವವರ ಕೈಗಳನ್ನು ತರಿವೆನೆಂದು ಏರಾಡಿ ಹೋಗಲು, ಸುಭಟರು ಆಗ ಹೆದರಿ ಲಕ್ಷ್ಮಣನಿಗೆ ಅರುಹಿದರು. ಲಕ್ಷ್ಮಣನು ಬಂದು, ಎಲೆ ತಮ್ಮಾ ಕುದುರೆಯನ್ನು ಬಿಟ್ಟುಬಿಡೆಂದನು. ಆವನಿಗೂ ಅದೇ ಉತ್ತರವನ್ನು ಹೇಳಿದನು

ಮುಂದೆ ಒಬ್ಬರಿಗೊಬ್ಬರಿಗೆ ಘನಯುದ್ಧವಾಗಿ ಲಕ್ಷ್ಮಣ, ಶತ್ರುಜ್ಞ, ಭರತಾದಿಗಳು, ರಾಮಾಕೃತಿಯುಳ್ಳ ಲವನಂ ಮೋಹಿಸಿ ರಥದಲ್ಲಿ ಕೂಡ್ರಿಸಿ ಕೊಂಡೊಯ್ದರು. ಅತ್ತ ಋಷಿಕುಮಾರರು ಲವನನ್ನು ರಾಜಕುಮಾರರು ಒಯ್ದ ಸುದ್ದಿಯನ್ನು ಜಾನಕಿಗೆ ತಿಳಿಸಲು, ಜಾನಕಿಯು ಮಗನ ಗುಣ ಶೀಲಗಳನ್ನು ನೆನೆನೆನೆದು, "ಕಂದನೆಲ್ಲಿರ್ಪನೋ ? ಪಗೆಯ ಕೈಗೊಳಗಾದನೋ ? ಪಸುಳೆಗೇನಾಯ್ತೋ ? ಅಸುವಿಡಿದಿಹನೋ ? ಮುದ್ದು ಮಗನ ಅಗಲಿ ಜೀವಿಸಲೆಂತು ?" ಎಂದು ಬಿದ್ದು ಗೋಳಾಡುತ್ತಿದ್ದಳು. ಅಷ್ಟರಲ್ಲಿ :

ಅನ್ನೆಗಂ ಬಂದ ನಗ್ಗದ ಸಮಿತ್ಪುಷ್ಪಂಗ ।
ಳಂ ನೈತ್ತಿಯೋಳ್ಪೊತ್ತುಕೊಂಡು ಕುಶ ನಳುತಿರ್ಪ ।
ತನ್ನ ತಾಯಂ ಕಂಡಿ ದೇ ನಧ್ಬುತ ಪ್ರಳಾಪಂ ನಿನಗೆ ಪೇಳೆನಲ್ಕೆ ॥
ಬನ್ನಮಂ ಕೇಳ್ಮಗನೆ ಹಯವೊಂದು ಬರಲದಂ ।
ನಿನ್ನ ತಮ್ಮಂ ಕಟ್ಟಲರಸುಗಳ್ಪಿಡಿದೊಯ್ದ ।
ರಿನ್ನೇವೆನೆಂದು ಜಾನಕಿ ನುಡಿಯೆ ರೋಷದಿಂದಾ ಕುವರ ನಿಂತೆಂದನು ॥

ಶೋಕಮೇಕಿದಕೆ ಹರಣವನೊಯ್ದ ಡಂತಕನ ।
ಲೋಕಮಂ ಸುಡುವೆ ನಲ್ಲಹುದೆಂದಡಜಹರಿಪಿ ।
ನಾಕಿಗಳ ನುರುಪುವೆಂ ಮಿಕ್ಕರಸುಗಿರಸುಗಳ ಪಾಡಾವುದೀಗ ತನಗೆ ॥
ಆ ಕವಚ ಖಡ್ಗ ಧನುಶರ ಕಿರೀಟಂಗಳಂ ।
ತಾ ಕಳವಳಿಸ ದಿರೆಂದವನಿಜೆಗೆ ನುಡಿದೊಡವ ।
ಳಾ ಕುಶಂಗೊಳಗಣಿಂದಂಗಿಯಂತಂದಳವಡಿಸಿ ಪರಸಿಬೀಳ್ಕೊಟ್ಟಳು ॥

—ಜೈಮಿನಿ ಭಾರತ

ಆಗ ಕುಶನು ವಾಯು ವೇಗದಿಂದ ಬಂದು, "ಓ ಲಕ್ಷ್ಮಣಾ ಶತ್ರುಜ್ಞ ಭರತಾದಿಗಳೇ ! ಪೋಗಬೇಡಿರಿ, ಪೋಗಬೇಡಿರಿ. ಕದ್ದೊಯ್ಯರೇ ? ತುರಗ ಸಹಿತ ಲವನಂ ? ಬಿಟ್ಟೈದಿರಿ. ಇಲ್ಲದಿರೆ ಬಲು ಎಚ್ಚರಿಕೆ ಯೆಂದು ಗದ್ದರಿಸಲು, ಸಕಲ ಸೈನ್ಯದೊಡಗೂಡಿದ ಲಕ್ಷ್ಮಣಾದಿಗಳು ತಿರುಗಿ ಬಂದು ಯುದ್ಧಮಂ ಮಾಡಿದರು. ಲವಕುಶರೊಡನೆ ಸೋತು ರಣಭೂಮಿಯಲ್ಲಿ ಮೂರ್ಛೆ ಹೊಂದಿದರು. ಆ ವಾರ್ತೆಯಂ ಕೇಳಿ ಶ್ರೀರಾಮನು ಬಂದು ಬಾಲರ ಕೂಡ ಯುದ್ಧವಂ ಮಾಡಿ, ಸೋತು ಹಣೆಗೆ ಕೈ ಹಚ್ಚಿಕೊಂಡು ಕೂತನು. ಇತ್ತ ಲವ ಕುಶರು ದಿಗ್ವಿಜಯರಾಗಿ ರಾಮಾದಿಗಳ ವಸ್ತ್ರಾಭರಣಗಳನ್ನೂ ಅವನ

ಭಕ್ತರಾದ ಜಾಂಬವ ಹನುಮಂತರನ್ನು ಸೆರೆಹಿಡಿದುಕೊಂಡು, ಜಾನಕಿಯ ಬಳಿಗಂ ಬಂದು ಪಾದದ ಮೇಲೆ ಬಿದ್ದು ನಮಸ್ಕರಿಸಿದರು. ಸೀತೆಯು ರಾಮಾದಿಗಳ ವಸ್ತ್ರಾಭರಣಗಳಂ ನೋಡಿ ಚಿಂತಾಕ್ರಾಂತಳಾದಳು. ಅವನ್ನೂ ಅವನ ಭಕ್ತರನ್ನೂ ತಿರುಗಿ ಕೊಟ್ಟು ಬರ್‍ರಿಯೆಂದು ಹೇಳುವಷ್ಟರಲ್ಲಿ, ವಾಲ್ಮೀಕಿ ಋಷಿಗಳು ಬಂದು ನಡದ ಸಂಗತಿಯನ್ನು ಕೇಳಿ ಹರುಷಿತರಾಗಿ, ಸೀತೆಯನ್ನು ಸಂತೈಸಿ ಆಕೆಯ ಮಕ್ಕಳನ್ನು ಕರಕೊಂಡು ಶ್ರೀರಾಮನಲ್ಲಿಗೆ ಹೋದರು. ಮಕ್ಕಳು ಯಾರೆಂಬುದನ್ನು ಶ್ರೀರಾಮನಿಗರುಹಿ, ತಾವು ಬರೆದಿಟ್ಟ ರಾಮಾಯಣವನ್ನು ಆ ಮಕ್ಕಳ ಬಾಯಿಂದ ಹಾಡಿಸಿದರು. ರಾಮನು ಆನಂದ ಭರಿತನಾಗಿ ತನ್ನ ಮಕ್ಕಳನ್ನು ತೆಗೆದು ಬಿಗಿದಪ್ಪಿದನು ಸೀತೆಯನ್ನು ನೋಡಿ " ಮೂಜಗವು ಅರಿಯುವಂತೆ ನೀನು ಪರಿಶುದ್ಧಳಾಗಿರುವಿ. " ಬಾಯೆಂದು ಕರೆದು ಮನ್ನಿಸಿ, ಎಲ್ಲರೂ ಅಯೋಧ್ಯೆಗೆ ಹೋಗಿ ಬಹು ಸುಖದಿಂದ ರಾಜ್ಯವಾಳಿ ಕೀರ್ತಿ ಶಾಲಿಗಳಾದರು.

---

# ಮಂಡೋದರಿ



ಲಂಕಾ ಪಟ್ಟಣಕ್ಕೆ ಒಡೆಯನಾದ ರಾವಣನ ಧರ್ಮಪತ್ನಿಯೇ ಮಂಡೋದರಿಯು. ಈಕೆಯು ಮಹಾ ಪತಿಭಕ್ತಿ ಶಿರೋಮಣಿಯು. ರಾವಣನು ಸೀತೆಯನ್ನು ತಂದು ಅಶೋಕವನದಲ್ಲಿಟ್ಟಾಗ, ಆ ಜಗನ್ಮಾತೆಯನ್ನು ಶ್ರೀರಾಮನಿಗೆ ಒಪ್ಪಿಸಿ ಬಿಡುಯೆಂದು ಮಂಡೋದರಿಯು ಗಂಡನಿಗೆ ಅನೇಕ ಬುದ್ಧಿವಾದಗಳನ್ನು ಹೇಳಿದಳು. ಆ ಬುದ್ಧಿವಾದಗಳನ್ನು ಪ್ರತಿಯೊಬ್ಬ ಹೆಂಗಳೆಯರೂ ಓದುವಂಥಾವಿವೆ. ಅವುಗಳಲ್ಲಿ ಅಡಕವಾಗಿವೆ ಮಂಡೋದರಿಯ ದಿವ್ಯ ಗುಣಗಳು. ಅವುಗಳಿಂದಲೇ ಈ ಕಥೆಯು ಮುಂದುವರಿದಿದೆ.

**ರಾವಣ :—** ಮಂಡೋದರಿ ! ಕ್ಷಮೆಯೂ ಸಿದ್ಧಿಯೂ ಒಟ್ಟುಗೂಡಿ ಸ್ತ್ರೀರೂಪವನ್ನು ಧರಿಸಿ ಮಂಡೋದರಿಯೆಂಬ ಪವಿತ್ರ ನಾಮವನ್ನು ಪಡೆದಿರುವೆ. ದೇವಿ ! ನೀನು ಇಂದು ಹೀಗೇಕೆ ಮೌನದಿಂರಿರುವೆ ?

**ಮಂಡೋದರಿ :—** ಪ್ರಿಯನೇ ! ಒಳಗೆ ಧರ್ಮವು ಉರಿಯಿತು. ಹೊರಗೆ ಲಂಕೆಯು ಉರಿಯಿತು. ಸೀತಾಪಹರಣದ ಫಲವಾಗಿ ಎಂತಹ ಘೋರ ವಿಪತ್ತುಗಳು ಕಾದಿವೆಯೋ ಬಲ್ಲವರಾರು ? ಯುದ್ಧವೇನಾದರೂ ಕೈಗಟ್ಟಿದರೇ ?

**ರಾವಣ :—** ರಾಮನೆಂಬ ಬೊಂಬೆಯು ನನಗೆ ಲೆಕ್ಕವೇ ?

**ಮಂಡೋದರಿ :—** ಶ್ರೀರಾಮನಿಂದ ಸೋತ ಪರಶುರಾಮನೇ ಅದಕ್ಕೆ ಉತ್ತರ ಹೇಳಬೇಕು. ಆರ್ಯಪುತ್ರ ! ಶ್ರೀರಾಮನು ಶೂರಾಗ್ರಣಿಗಳಲ್ಲೊಬ್ಬನು. ಆದರೂ ನಿನಗೆ ಮಾತ್ರ ಧರ್ಮದ ಬಲವಿದ್ದ ಪಕ್ಷಕ್ಕೆ ನೂರು ಮಂದಿ ರಾಮರು ಯುದ್ಧಕ್ಕೆ ಬಂದಿದ್ದರೂ ನೀನು ಲಕ್ಷ್ಯ ಮಾಡಬೇಕಾಗಿರಲಿಲ್ಲ. ಈಗ ಒಬ್ಬ ರಾಮನು ಲಂಕೆಯನ್ನು ಮುತ್ತಿದರೂ ನಾವು ತಲ್ಲಣಿಸ

ಬೇಕಾಗಿದೆ. ಅಂಜನೇಯನು ಸಾಮಾನ್ಯನೆ? ಇದರ ಮೇಲೆ ಕಪಿ ಸೈನ್ಯವು ಬೇರೆ?

**ರಾವಣ :**– ಲಂಕೆಯನ್ನು ಮುತ್ತುವದು ಮಾತಾಡುವಷ್ಟು ಸುಲಭ ವಲ್ಲ ಹುಲ್ಲು ಮನುಜನಾದ ಆ ರಾಮನಿಗೆ ಹೆದರಲೇ ನಾನು?

**ಮಂಡೋದರಿ :**— ಪ್ರಭುವೇ! ರಾಮನಿಗೆ ಹೆದರಬೇಡ. ಧರ್ಮಕ್ಕೆ ಹೆದರು.

**ರಾವಣ :**—ಮಾತೆತ್ತಿದರೆ ಧರ್ಮವೆನ್ನುತ್ತಿರುವೆ? ಧರ್ಮಶರಣನೆಂದು ಹೊಗಳಿಸಿಕೊಳ್ಳುವ ಹೇಡಿಯಾದ ಆ ರಾಮನು, ಮನುಷ್ಯರಿಗಿಂತ ಕೀಳಾಗಿ ನಡೆದು, ನನ್ನ ತಂಗಿ ಶೂರ್ಪನಖಿಗೆ ಅಸಭ್ಯರೂ ಅಳುಕುವಂತಹ ಶಿಕ್ಷೆಯನ್ನು ವಿಧಿಸಿದನಲ್ಲಾ! ಸೀತಾಪಹರಣವೇ ಅದಕ್ಕೆ ತಕ್ಕ ಪ್ರತಿಕಾರವೆಂದು ಭಾವಿಸಿ, ನಾನು ಸೀತೆಯನ್ನು ತಂದುದುಂಟು.

**ಮಂಡೋದರಿ :**— ಶೂರ್ಪನಖಿಯು ಬಾಲ್ಯವಯಸ್ಸಿನಲ್ಲಿ ವಿಧವೆ ಯಾದುದಕ್ಕಾಗಿ ನಾನೂ ಮರುಗುತ್ತಿದ್ದೆನು. ಅವಳಿಗೆ ವಿಧಿಸಲ್ಪಟ್ಟ ಕ್ರೂರ ದಂಡನೆಯನ್ನು ಕಂಡು ನಾನೂ ಕಣ್ಣೀರು ಬಿಟ್ಟೆನು. ಆದರೂ ಅವಳು ಮಾಡಿದುದು ಮಹಾಪರಾಧ....ಮಹಾಪರಾಧ....ಶ್ರೀರಾಮನನ್ನು ಮೋಹಿಸಿ ಹಗರಣವನ್ನು ತಂದುಕೊಂಡುದು ತಪ್ಪು.

**ರಾವಣ :**—ಅದು ಏನೇ ಇರಲಿ. ರಾಮನ ಅಪರಾಧಕ್ಕೆ ಸೀತಾಪಹರ ಣವೇ ತಕ್ಕ ದಂಡನೆ.

**ಮಂಡೋದರಿ :**— ಸೀತಾಪಹರಣದಿಂದ ಮಾತ್ರವೇ ಅದು ಕೊನೆ ಗಂಡಿದ್ದರೆ, ಸೀತಾದೇವಿಯನ್ನು ಶ್ರೀರಾಮನ ಬಳಿಗೆ ಕಳುಹಿಸಿ ಅವನಿಗೆ ಬುದ್ಧಿ ಕಲಿಸಿದ್ದರೆ, ಧರ್ಮಚ್ಯುತಿಗೆ ಅವಕಾಶವೇ ಇರುತ್ತಿರಲಿಲ್ಲ. "ಕದ್ದು ತಂದೆಯೇ ಹೊರತು ಗೆದ್ದು ತರಲಿಲ್ಲ" ರಾಮನು ಪರಾಕ್ರಮಿಯೆಂಬುದಕ್ಕೆ ಅದೂ ಸಾಕ್ಷಿ. ಧರ್ಮದ ಬೆಂಬಲವಿದ್ದರಲ್ಲವೇ? ಧೈರ್ಯದ ಹಂಬಲ.

**ರಾವಣ** :—ನಡೆಯುವುದು ನುಡಿಯುವಷ್ಟು ಸುಲಭವಲ್ಲ. ಕಿವಿ ಮೂಗುಗಳನ್ನು ಕಳೆದುಕೊಂಡ ನನ್ನ ತಂಗಿಯ ವಿಕಟ ರೂಪವು ನನ್ನ ಕಣ್ಣೆದುರಿಗೆ ಬಂದರೆ........

**ಮಂಡೋದರಿ** :—ನಾಥಾ! ಈಗಿನ ನಿನ್ನ ಹೃದಯವಿಕಾರಕ್ಕೆ ಈ ಪ್ರತಿಕಾರದ ಹೆಸರನ್ನಿಟ್ಟಿರುವೆಯಲ್ಲವೇ? ಮನಸ್ಸಿನೆದುರಿಗೆ ಬುದ್ಧಿಯನ್ನು ನಾಟ್ಯವಾಡಿಸಿ ನಿನ್ನನ್ನು ನೀನೇ ವಂಚಿಸಿಕೊಳ್ಳುವದೇ? ಧರ್ಮವೃಕ್ಷವನ್ನು ಕಡಿದು ನೆಲಕ್ಕುರುಳಿಸಿ ಪತಿತನಾಗುವದೇ? ನುಡಿಯುವದು ನಡೆಯುವಷ್ಟು ಸುಲಭವಲ್ಲವಂತೆ? ತೇಜಸ್ವಿಗಳಾದವರಲ್ಲಿ ನಡೆಯುವದು ನುಡಿಯುವದಕ್ಕಿಂತಲೂ ಸುಲಭ. ಆಗ್ಗೆ ನುಡಿಗಿಂತ ನಡೆಯೇ ಮೇಲು.

**ರಾವಣ** :—ಮಂಡೋದರಿ? ನನ್ನ ಸ್ಥಿತಿಯನ್ನು ನೀನು ಅರಿತಿದ್ದರೆ ನೀನೆಂದಿಗೂ ಹೀಗೆ ಮಾತಾಡುತ್ತಿರಲಿಲ್ಲ. ನೀನು ಇದು ವರೆಗೂ ನನ್ನ ಸುಖ ದುಃಖಗಳಲ್ಲಿ ಸಮಭಾಗಿನಿಯಾಗಿದ್ದವಳು. ನನ್ನ ದುಃಖದ ಅಳವನ್ನರಿಯದೆ ಬಿರುನುಡಿಗಳನ್ನಾಡುತ್ತಿರುವೆ. ಸೀತಾಪಹರಣ ಮಾಡಿ ನಾನು ದುಃಖದ ಮಡುವಿನಲ್ಲಿ ಮುಳುಗಿದ್ದೇನೆ.

**ಮಂಡೋದರಿ** :–ನಾಥಾ! ಹೀಗೇಕೆ ನನ್ನ ಕೊರಳನ್ನು ಕೊಯ್ಯುವೇ? ಲಂಕೆಯನ್ನು ಸುಟ್ಟುದುದಕ್ಕಾಗಿ ಆಂಜನೇಯನನ್ನು ನೀನು ಕೊಲ್ಲಲುದ್ಯುಕ್ತನಾದಾಗಿನ ನನ್ನ ವರ್ತನೆಯನ್ನು ಸ್ಮರಿಸಿಕೊ. ಅಯ್ಯೋ! ಅದು ನನ್ನ ಕರುಳೇ ಬೆಂದದಿನ ಅಕ್ಷಯಕುಮಾರನು ಮೃತಪಟ್ಟದಿನ. ಅದನ್ನು ಸ್ಮರಿಸಿಕೊ. ನನಗೆ ದುಃಖವಿಲ್ಲವೇ?

**ರಾವಣ** :— ಕುಮಾರನಲ್ಲಿ ನನಗೆ ಪ್ರೀತಿಯಿದ್ದಿಲ್ಲವೇ? ಆದುದರಿಂದಲೇ ಅವನನ್ನು ಕೊಂದ ಅಪರಾಧಕ್ಕಾಗಿ ಆಂಜನೇಯನನ್ನು ನಾನು ವಧಿಸಹೋದುದು.

**ಮಂಡೋದರಿ** :—ಕುಮಾರನಿಗಿಂತ ಧರ್ಮವು ಹೆಚ್ಚೆಂದು ನಾನು ಭಾವಿಸಿದುದರಿಂದಲೇ ನಾನು ಅದಕ್ಕೆ ಅವಕಾಶ ಕೊಡದೆ ಅಡ್ಡಿಯಾಗಿ

ಬಂದು ನಿನ್ನ ಖಡ್ಗಕ್ಕೆ ನಾನೇ ಮೊದಲು ಆಹುತಿಯಾಗಲು ಸಿದ್ಧವಾಗಿ ನಿಂತುದು. ದೇವಾ ! ನಿನ್ನ ರಾಜ್ಯದಲ್ಲಿರುವ ಪ್ರಜೆಗಳೆಲ್ಲರೂ ನನ್ನ ಇಂದ್ರಜಿತು ಮಗನಿಗೆ ಸಮಾನರು. ಅವರಿಗೆ ಸೇರಿರುವ ರಾಜ್ಯದ ಸತ್ಕೀರ್ತಿಯನ್ನುಳಿಸಲು ನನ್ನ ದೇಹವೂ, ನನ್ನ ಪ್ರಾಣವೂ ಎರಡೂ ಮೀಸಲು.

**ರಾವಣ :**— ನೀನು ವೀರ ರಮಣಿ. ನಾನು ಅದನ್ನು ಬಲ್ಲೆ. ಲೋಕ ವೆಲ್ಲವೂ ಬಲ್ಲದು ?

**ಮಂಡೋದರಿ :**— ಪ್ರಭುವೇ ! ಈ ಬಗೆಯ ಹೊಗಳಿಕೆಗೆ ಸಮ ಯವೇ ? ನನಗೆ ಇದೊಂದೂ ಬೇಡ. ನನ್ನ ಮನಸ್ಸೇ ಹುಣ್ಣಾಗಿದೆ. ಪರಮೇ- ಶ್ವರನನ್ನು ಪ್ರಸನ್ನನಾಗಿ ಮಾಡಿಕೊಂಡ ಮಹಾ ವೀರಭಕ್ತ ನೀನು. ಕಾಮ ವಿಕಾರದ ಅಂಧತಮಸ್ಸಿನಲ್ಲಿ ಮುಳುಗಿ ನಿನ್ನ ದಿವ್ಯ ತೇಜಸ್ಸನ್ನು ಕಳೆದು ಕೊಳ್ಳುವೆಯಾ ? ಬೇಡ. ಪ್ರಿಯನೆ ಬೇಡ. ನಿನ್ನನ್ನು ಶರಗೊಡ್ಡಿ ಬೇಡಿ ಕೊಳ್ಳುವೆನು.

**ರಾವಣ :**— ಮಂಡೋದರಿ ! ನಾನೇ ನನ್ನನ್ನು ನಿಂದಿಸಿಕೊಂಡಿರು ವಷ್ಟು ಮತ್ತಾರೂ ನನ್ನನ್ನು ನಿಂದಿಸಿರಲಾರರು. ಒಮ್ಮೆ ಮೋಹಾಂಧಕಾರಕ್ಕೆ ವಶವರ್ತಿಯಾಗಿ ಪಾಷಂಡನಂತೆ ವರ್ತಿಸುತ್ತೇನೆ. ಮರುಕ್ಷಣವೇ ನನ್ನ ಅವಿ ವೇಕಕ್ಕಾಗಿ ನಾನೇ ಮನಮರುಗಿ ಸಂಕಟಪಡುತ್ತೇನೆ.

**ಮಂಡೋದರಿ :**— ನಾಥಾ ! ಅದಕ್ಕಾಗಿಯೇ ನಾನು ಹೇಳುವದು. ಕೆಳಕ್ಕುರುಳುವದಕ್ಕೆ ಮೊದಲೇ ಎಚ್ಚತ್ತುಕೊ. ಧರ್ಮವನ್ನು ಶರಣೆಂದು ಉದ್ಧಾರವಾಗು. ಜಗತ್ತಿಗೆ ಆದರ್ಶಪ್ರಾಯನಾಗು. ಪ್ರಿಯನೆ ! ಸರ್ವಸ್ವವು ನೀನೇಯೆಂದು ನಂಬಿರುವ ನನ್ನನ್ನು ಮುಳುಗಿಸಬೇಡ. ನೀನೂ ಉದ್ಧಾರವಾಗಿ ನನ್ನನ್ನೂ ಉದ್ಧಾರಮಾಡು. ಸರ್ವಮಂಗಳೆಯು ನಿನ್ನನ್ನು ಕಾಪಾಡಲಿ. !

* * * *

ರಾವಣನು ಶಸ್ತ್ರಾಸ್ತ್ರಗಳನ್ನು ಧರಿಸಿ ಮಂಡೋದರಿಯ ಮಾತುಗಳ ನ್ನುಲ್ಲಂಘಿಸಿ ಯುದ್ಧ ಸನ್ನದ್ಧನಾಗಿ ಮಂಡೋದರಿಯ ಬಳಿಗೆ ಬರುವನು.

ಮಂಡೋದರಿಯು ದುಃಖದಿಂದ ಪತಿಯ ಪಾದಕ್ಕೆರಗುವಳು. ಏಳು ರಮಣಿ ಮೇಲಕ್ಕೇಳು ಎಂದು ಮಂಡೋದರಿಯನ್ನಾಲಿಂಗಿಸಿ, ನೀನು ನನ್ನ ಜೀವರತ್ನ ವೆನ್ನುವನು. ಆಗ ಮಂಡೋದರಿಯು ನನ್ನ ಪ್ರಾರ್ಥನೆಯ ವಿಷಯವೇನಾಯಿತೆಂದು ಕೇಳುವಳು.

**ರಾವಣ :**—ಮಂಡೋದರಿ! ಸ್ವಲ್ಪ ತಡೆ. ನನ್ನ ಪ್ರಿಯ ಪುತ್ರರನ್ನೂ ನನ್ನ ತಮ್ಮನನ್ನೂ ಕೊಂದವರನ್ನು ತೀರಿಸಿದ ಮೇಲೆ ಆ ಮಾತಿನ ವಿಚಾರ. ಅಯ್ಯೋ! ಮುದ್ದುಗುವರ **ಇಂದ್ರಜಿತುವು** ಬಾಲ್ಯದಲ್ಲಿ ನನ್ನ ಗದೆಯನ್ನು ಎತ್ತಲು ಪ್ರಯತ್ನಿಸಿ ಮುಕ್ಕಿರಿಯುತ್ತಿದ್ದುದೂ; ಸ್ವಲ್ಪ ದಿನಗಳಲ್ಲೇ ಆದನ್ನು ಎತ್ತುವಷ್ಟು ಸಾಮರ್ಥ್ಯ ಉಂಟಾಗುವದೆಂದು ತನಗೆ ತಾನೇ ಸಮಾಧಾನ ಹೇಳಿಕೊಳ್ಳುತ್ತಿದ್ದುದೂ, ಒಂದು ದಿನ ಅವನು ನನ್ನನ್ನು ಕುರಿತು “ತಂದೆಯೆ ನನಗೆ ಶೂರರೊಬ್ಬರನ್ನೂ ಬಿಡದೆ ನೀನೇ ಎಲ್ಲರನ್ನೂ ಜಯಿಸಿ ಬಿಡಬೇಕೆಂದಿದ್ದೀಯೋ, ನಿನಗೆ ನನ್ನಲ್ಲಿ ಅಮ್ಮನಷ್ಟು ಪ್ರೀತಿಯಿಲ್ಲ” ಎಂದು ಹೇಳಿದುದೂ, **ಅಕ್ಷಯಕುಮಾರನು** ಬಾಲಕನಾಗಿದ್ದಾಗ ತನ್ನ ಆಟದ ಬಿಲ್ಲನ್ನು ತೋರಿಸಿ, ನಿಂಗೆ ದೊಡ್ಡ ಬಿಲ್ಲು. ಅಣ್ಣ ಇಂದ್ರಜಿತೂಗೆ ದೊಡ್ಡ ಬಿಲ್ಲು. ನಂಗೆ ಮಾತ್ರ ಪುಟ್ಟ ಬಿಲ್ಲು. ಅಮ್ಮಂಗೆ ಹೇಳಿ ಎರಡೂ ಬಿಲ್ಲು ನಾನೇ ತೊಗೋತೀನಿ.” ಎಂದು ಮುಂತಾಗಿ ಹೇಳುತ್ತಿದ್ದುದೂ, ಮೃತ್ಯುಶಯ್ಯೆಯಲ್ಲಿ ಮಲಗಿದ ತಮ್ಮನಾದ **ಕುಂಭಕರ್ಣನು** “ಅಣ್ಣಾ ಯುದ್ಧರಂಗದಲ್ಲಿ ನೀನು ಒಬ್ಬಂಟಿಗನಾದೆ. ನಿನ್ನನ್ನು ಬಿಟ್ಟು ಹೋಗಲಾರೆ” ಎಂದು ಹೇಳಿ ಕಂಬನಿದುಂಬಿದುದೂ, ಇವೆಲ್ಲಾ ನೆನಪಿಗೆ ಬಂದವು. ನನಗೋಸ್ಕರ ನಿರಪರಾಧಿಗಳಾದ ಇಬ್ಬರು ಮಕ್ಕಳು ಬಲಿಯಾದರು. ಬಲಭುಜದಂತಿದ್ದ ತಮ್ಮನೂ ಆಹುತಿಯಾದನು. ಎಂದು ರೋಧಿಸಲು ಮಂಡೋದರಿಯು ರಾವಣನನ್ನಪ್ಪಿಕೊಂಡು, ಅವನ ಬುಜದ ಮೇಲೆ ತಲೆಯನ್ನಿಟ್ಟು ರೋಧಿಸಿದಳು. ದುಃಖವೇಗವು ಕಡಿಮೆಯಾದ ಮೇಲೆ ಆರ್ಯಪುತ್ರಾ! ಈಗೇಕೆ ಆ ಹಿಂದಿನ ಪ್ರಪಂಚದ ಸುದ್ದಿ?

**ರಾವಣ :**—ಮಂಡೋದರಿ! ರಾಮನನ್ನು ಸೆರೆಹಿಡಿದು ತಂದು, ಆ ಬಳಿಕ ಸೀತೆಯನ್ನೊಪ್ಪಿಸಿ ಅವನನ್ನು ಬೀಳ್ಕೊಡುವೆನು. ಇಲ್ಲವೆ ಈ ತನುವನ್ನು ಈಡಾಡಿ ವೀರನಿಗೆ ಉಚಿತವಾದ ಮರಣವನ್ನು ಪಡೆಯುವೆನು.

ಎಲವೋ ! ಮದಾಂಧರಾದ ಬಣಗುಗಳಿರಾ ! ನನ್ನ **ಇಂದ್ರಜಿತುವನ್ನೂ** ನನ್ನ ಮುದ್ದಿನ ಸಿಂಹ ಕಿಶೋರ **ಅಕ್ಷಯನನ್ನೂ,** ಕೊಂದಿರುವ ನಿಮ್ಮೆಲ್ಲರನ್ನು ವಧಿಸಿದಲ್ಲದೆ ನನಗೆ ತೃಪ್ತಿಯಿಲ್ಲ. ನೀವು ಎಲ್ಲಿಗೆ ಹೋದರೂ ಬಿಡೆನು. ಮೇದಿನಿಯಲ್ಲಿರಲಿ, ಸ್ವರ್ಗದಲ್ಲಿರಲಿ, ಅಜನ ಗುಂಡಿಗೆಯಲ್ಲಿರಲಿ, ನೀವು ಎಲ್ಲಿ ಹೋಗಿದ್ದರೂ ನಿಮ್ಮನ್ನು ರಣರಂಗಕ್ಕೆ ಸೆಳದು ತಂದು, ದಿಗ್ಬಲಿಹೊಡದು ರಣಭೂಮಿಗೆ ಕಾಣಿಕೆಯನ್ನೊಪ್ಪಿಸುವೆನು. ಎಂದು ರಾವಣನು ಯುದ್ಧಕ್ಕೆ ಹೊರಟುಹೋದನು.

**ಮಂಡೋದರಿ** :—(ರಾವಣನು ಹೋದ ಕಡೆಗೆ ದೃಷ್ಟಿಸಿ ನೋಡುತ್ತಾ ಕಣ್ಣೀರಿನೊಡನೆ) ಕೊಂದು ಕೊಲಿಸಿಕೊಳ್ಳಲು ತೆರಳಿದೆಯಾ ನಾಥಾ ! ಆರ್ಯಪುತ್ರನು ಮಾನಧನನೆಂಬುದನ್ನು ಮರೆತು ಮಾತನಾಡಿದೆ. ದುಡಿಕಿ ನುಡಿದೆ. ನನ್ನ ಎರಡು ಜೀವರತ್ನಗಳು ಪುಡಿಯಾದವು. ಆರ್ಯಪುತ್ರನು ಏನಾಗುವನೋ ? (ಸ್ವಲ್ಪ ಚಿಂತಿಸಿ) ಕೊನೆಗೆ ಸಾವೇ ನನಗೆ ಶರಣೆಂದು ತೋರುತ್ತದೆ. ನನ್ನ ಜೀವಾತ್ಮವು ಪಂಜರದಲ್ಲಿಟ್ಟ ಪಕ್ಷಿಯಂತಾಗಿದೆ. ಬಂದುದೆಲ್ಲಿಂದಲೋ ? ಮುಂದೆಲ್ಲಿಗೆ ಪ್ರಯಾಣವೋ ? ಒಂದೂ ತಿಳಿಯದು. ಸದ್ಯದಲ್ಲೇನೋ ಅದು ಪಂಜರಬದ್ಧವಾಗಿ ಪಾಡು ಪಡುತ್ತಿದೆ. ಸರ್ವಮಂಗಳೇ! ಸಮಸ್ತವೂ ನೀನೇ ಗತಿಯೆಂದು ಭಾವಿಸಿದವರಿಗೆ ಇದೇ ಗತಿಯೇ ? ಐಹಿಕ ಜೀವನದಲ್ಲಿ ಇದಕ್ಕಿಂತ ಉತ್ತಮವಾದ ಮತ್ತಾವ ಪರಿಣಾಮವೂ ಇಲ್ಲವೇ ? ಅಥವಾ ನಮ್ಮ ಅಪರಿಮಿತ ಭಾವನೆಗಳ ಮುರುಕು ತಕ್ಕಡಿಯಲ್ಲಿ, ನಿನ್ನ ನ್ಯಾಯವನ್ನು ತೂಗುವದು ತರವೇ ? ನಿನ್ನ ಮಾಯಾಜಾಲವನ್ನು ಭೇದಿಸಲು ನನಗೆಲ್ಲಿಯ ಅಧಿಕಾರ ! ಸೇವೆಗೆ ಬಂದವಳು ಸೇವಕಿಯಂತಿರಬೇಕು. ದೇವಿ ! ನಿನ್ನ ದಿವ್ಯ ಚಿತ್ತಕ್ಕೆ ತೋರಿದುದೇ ನನಗೆ ಮಹಾ ಪ್ರಸಾದ. ಕರ್ತವ್ಯವನ್ನು ನೆರವೇರಿಸುವದೊಂದೇ ನನ್ನ ಮೇಲಣ ಭಾರವೆಂದು ದೇವಿಯ ಗುಡಿಯ ಕಡೆಗೆ ಸಾಗಿದಳು.

* * * *

( ಅಶೋಕವನದಲ್ಲಿ ಭದ್ರಕಾಳಿಯ ದೇವಾಲಯ. ಸೀತಾದೇವಿಯೂ ಮಂಡೋದರಿಯೂ ಒಬ್ಬರೆದುರಿಗೆ ಮತ್ತೊಬ್ಬರು ಕುಳಿತು ಭದ್ರಕಾಳಿಯನ್ನು ಪೂಜಿಸುತ್ತಿರುವರು. ಭದ್ರಕಾಳಿಯ ಪಾದದ ಮೇಲೆ ಹೂಗಳ ಒಂದು ರಾಶಿಯೇ ಇರುವದು. ಸಮಯ : ಬೆಳಗಿನ ಜಾಮದ ವೇಳೆ. )

**ಮಂಡೋದರಿ :**—ತಂಗೀ! ನಾವೀರ್ವರೂ ಎಷ್ಟು ಹೊತ್ತು ಪೂಜೆ ಮಾಡಿ ಧ್ಯಾನಮಗ್ನರಾಗಿದ್ದೆವೆಂಬುದರ ಅರಿವೇ ಇಲ್ಲ. ಕೊನೆಯದಾದ ಪುಷ್ಪಾಂಜಲಿಯನ್ನೊಪ್ಪಿಸಬೇಕಾದ ಸಮಯವೇಕೆ ಬಂದಿತೋ? ಎನಿಸುತ್ತದೆ. ಅದರಲ್ಲೂ ಈ ದಿನವಂತೂ ಹೇಳಬೇಕಾದುದೇ ಇಲ್ಲ.

**ಸೀತಾದೇವಿ :**—ಅಕ್ಕಾ, ದೇವಿಯ ಪೂಜೆಯಲ್ಲಿ ನಿನಗೆಷ್ಟು ಆದರ? ಎಷ್ಟು ಭಕ್ತಿ?

**ಮಂಡೋದರಿ :**—ತಂಗೀ ನಿನ್ನಷ್ಟೆ ನನ್ನಲ್ಲಿ ಭಕ್ತಿ? ಆದರೂ.... ಈ ದಿನ........ಹೋಗಲಿ........ಆ ಮಾತು ಬೇಡ.

**ಸೀತಾದೇವಿ :**—ಅಕ್ಕಾ ಆ ಮಾತು ನನ್ನೊಡನೆ ಹೇಳಲು ಹಿಂತೆಗೆಯುವುದೇತಕ್ಕೆ? ನಾನು ಇಲ್ಲಿಗೆ ಬಂದಾಗಿನಿಂದಲೂ ನೋಡುತ್ತಿದ್ದೇನೆ. ನನ್ನ ಮೇಲಿನ ನಿನ್ನ ಪ್ರೀತಿ ವಿಶ್ವಾಸಗಳಿಗೆ ಪರಿಮಿತಿಯೇ ಇಲ್ಲವಾಗಿದೆ. ನಾನು ತಾಯಿಯನ್ನು ಕಂಡುದಿಲ್ಲ. ಸಹೋದರಿಯನ್ನು ಪಡೆಯುವ ಭಾಗ್ಯದಿಂದಲೂ ನಾನು ದೂರಳು. ಲಂಕೆಗೆ ಬಂದಾಗಿನಿಂದ ನೀನು ನನಗೆ ತಾಯಿಯೂ, ಸಹೋದರಿಯೂ ಕೂಡೇ ಆಗಿರುವೆ. ಹೀಗಿದ್ದ ನೀನು ನನ್ನೊಡನೆ ಅದನ್ನು ಹೇಳ ಕೂಡದೆ?

**ಮಂಡೋದರಿ :**—ತಂಗೀ! ಹೆಚ್ಚೇನೂ ಇಲ್ಲ. ನಾಳೆಯೇ ಯುದ್ಧದ ಕೊನೆಯ ದಿನ. ಇಹಲೋಕದಲ್ಲಿ ಭದ್ರಕಾಳಿಗೆ ಇದೇ ನನ್ನ ಕೊನೆಯ ಸೇವೆಯೋ ಏನೋ? ಎಂಬ ಸಂದೇಹ. ಅದರಿಂದ ಹಾಗೆ ತೋರಿತು. ಆದುದರಿಂವಲೆ ಎಷ್ಟು ಪೂಜಿಸಿದರೂ ತೃಪ್ತಿಯಿಲ್ಲ. ನೊಂದ ಮನಸ್ಸು. ಬೆಂದ ಕರುಳು, ಬಳಲಿದ ಜೀವ, ತಂಗೀ! ದೇವಿಯ ಪೂಜೆ, ಆರ್ಯಪುತ್ರನ ಸೇವೆ, ಪ್ರಜೆಗಳ ಆರಾಧನೆ, ಈ ಮೂರು ಕೆಲಸಗಳಿಂದಲೇ ನನ್ನ ಹೃದಯಕ್ಕೆ ಅಮೃತ ಸೇವನ.

**ಸೀತಾದೇವಿ :**—ಅಕ್ಕಾ! ನೀನು ದುಃಖದ ಪರೀಕ್ಷೆಗೂ ಸಿದ್ಧಳಾದ ಕರ್ಮಯೋಗಿನಿ. ನಿನ್ನಂತೆ ಕಷ್ಟಗಳನ್ನನುಭವಿಸುತ್ತಾ, ಹೀಗೆ ಸಮತೆಯಿಂದಿರುವದು ಸಾಮಾನ್ಯರಿಗೆ ಸಾಧ್ಯವೇ?

**ಮಂಡೋದರಿ** :— ಅಯ್ಯೋ ! ನನ್ನಲ್ಲಿ ಸಮತೆಯೆಲ್ಲಿದೆ? ಚಂಡ ಮಾರುತದ ನಿಶೀಥ ಸಮಯದಲ್ಲಿ ತನ್ನ ಕ್ಷೋಭೆಯನ್ನು ತಾನೇ ಸಹಿಸ ಲಾರದೆ ಆರ್ತಸ್ವರದಿಂದ ಮೊರೆಯುವ ಸಮುದ್ರದಂತೆ, ಒಂದೊಂದು ವೇಳೆ ನನ್ನ ಹೃದಯವು ಚೀರಿಡುವುದು ಹಾಗೆ ಚೀರಿಡುತ್ತಾ ಚೀರಿಡುತ್ತಾ "ಸರ್ವ ಮಂಗಳೆಯು ನಿಜವಾಗಿಯೂ ಕರುಣೆಯುಳ್ಳವಳೇ ? ಹಾಗಿದ್ದರೆ ಧರ್ಮ ಪರಾಯಣತೆಗೆ ಪ್ರತಿಫಲವಾಗಿ ಅವಳು ದುಃಖದ ಭಿಕ್ಷವನ್ನೇಕೆ ನೀಡುವಳು ? " ಎಂದು ನನ್ನ ಹೃದಯವು ಪ್ರಶ್ನೆ ಮಾಡುತ್ತದೆ. ಉತ್ತರ ಕ್ಷಣದಲ್ಲಿಯೇ ಸೇವೆಗೆ ಬಂದಿರುವವಳು, ಸೇವೆ ಮಾಡಲು ಮಾತ್ರವೇ ಅಧಿಕಾರಿಣಿಯೆಂದೂ, ಬುದ್ಧಿಯೂ, ವಿವೇಕವೂ ಹೇಳುತ್ತವೆ.

**ಸೀತಾದೇವಿ** :—ಅಕ್ಕಾ ! ಜೀವರತ್ನಕ್ಕೆ ತನ್ನ ಬೆಲೆಯು ತಿಳಿದಿರುವು ದೆನ್ನುವಿಯಾ? ಹಾಗೆ ತಿಳಿದಿದ್ದರೆ ಅದು ಜೀವರತ್ನವೆನಿಸಿಕೊಳ್ಳುತ್ತಿರಲಿಲ್ಲವೋ ? ಏನೋ ? ಇರಲಿ. ಪುಷ್ಪಾಂಜಲಿಯನ್ನರ್ಪಿಸಿ ಪೂಜೆಯನ್ನು ಪೂರೈಸೋಣ.

**ಮಂಡೋದರಿ** : – ಇಲ್ಲ. ಇಂದು ಪುಷ್ಪಾಂಜಲಿಯನ್ನರ್ಪಿಸಿ ದೇವಿ ಯನ್ನು ಪ್ರಾರ್ಥಿಸುವುದಿಲ್ಲ. ನಾಳೆ ಆರ್ಯಪುತ್ರನಿಗೂ ಶ್ರೀ ರಾಮನಿಗೂ ಘೋರವಾದ ಯುದ್ಧ. ಭದ್ರಕಾಳಿಯಲ್ಲಿ ಯಾವ ಕಾಮ್ಯಾರ್ಥವನ್ನು ಬೇಡಲಿ? ಒಡಹುಟ್ಟಿದವಳಿಗಿಂತ ಹೆಚ್ಚಾಗಿರುವವಳಿಗೆ, ಅಮಂಗಳವನ್ನು ಕೋರಲೇ ? ಇಲ್ಲವೇ ನನಗೆ .... ಅಯ್ಯೋ .... ಅದನ್ನು ....ಅಬ್ಬ....ಭಯಾನಕ ಸ್ಥಿತಿ.... ತಂಗಿ ! ಆತ್ಮಾರ್ಪಣವೇ ನಾನು ಭದ್ರಕಾಳಿಗೆ ಸಮರ್ಪಿಸುವ ಪುಷ್ಪಾಂಜಲಿ. ಅದಕ್ಕೆ ಅವಳು ಶಕ್ತಿಯನ್ನು ಕರುಣಿಸಲಿ ! (ದೇವಿಗೆ ಕೈ ಮುಗಿವಳು ).

**ಸೀತಾದೇವಿ** :— ಅಕ್ಕಾ ! ಅಕ್ಕಾ ! ಮನಸ್ಸು ಎಲ್ಲಿಯೋ ತೇಲಿ ಹೋಗುತ್ತಿದೆ. ಈಗಿನಂತೆ ನಾನು ಇಲ್ಲಿಗೆ ಬಾರದೆ, ಬೇರೆ ಸ್ಥಿತಿಯಲ್ಲಿ ಬಂದಿ ದ್ದರೆ, ನಾವಿಬ್ಬರೂ ಒಂದೇ ಕೊನೆಯ ಮೇಲಣ ಎರಡು ಸುರಗಿಯ ಹೂಗಳಂ ತಿರಬಹುದಾಗಿತ್ತು. ಹತಭಾಗ್ಯೆಯಾದ ನನಗೆ ಆ ಭಾಗ್ಯವೆಲ್ಲಿ ? ( ಆಗ ಸೀತೆಯೂ ಮಂಡೋದರಿಯೂ ಇಬ್ಬರೂ ನಿಂತು ಪುಷ್ಪಾಂಜಲಿಯನ್ನು ಎತ್ತಿ ಭದ್ರಕಾಳಿಯನ್ನು ಸ್ತುತಿಸಿದರು. )

* * * *

(ರಾವಣನು ಮರಣಶಯ್ಯೆಯಲ್ಲಿ ಮಲಗಿರುವನು. ಪರಿವಾರದವರೆಲ್ಲರೂ ನಿಸ್ತೇಜರಾಗಿರುವರು.)

ಆ ಸಮಯದಲ್ಲಿ ಯುದ್ಧದಲ್ಲಿ ಪತಿಯ ಕಡೆಗೆ ಪ್ರಯೋಗವಾಗಿದ್ದ ಈಟಿಯ ಪ್ರಹಾರವನ್ನು ತಪ್ಪಿಸಲು ಸರಕ್ಕನೆ ಮಧ್ಯಕ್ಕೆ ಸುಳಿದು, ಈಟಿಯಿಂದ ಆಹತಳಾದ ಮೂರ್ಛೆ ಹೊಂದಿದ **ಮಹಾಸತಿ ಮಂಡೋದರಿಯು ಆಂಜನೇಯನ** ಸಹಾಯದಿಂದ ಮೆಲ್ಲಗೆ ಹೆಜ್ಜೆಯನ್ನಿಡುತ್ತಾ ಬಂದು, ರಾವಣನನ್ನು ಕಂಡೊಡನೆಯೇ ಅವನ ಮೈಮೇಲೆ ಮೂರ್ಛೆಬಂದು ಬೀಳುವಳು.

**ಮಂಡೋದರಿ** :—( ರಾವಣನ ಪಾದಗಳ ಮೇಲೆ ತಲೆಯನ್ನಿಟ್ಟು ) ಪ್ರಾಣನಾಥಾ ! ನನ್ನ ಕೊನೆಯ ಸೇವೆ.

**ರಾವಣ** :—( ಏಳಲು ಪ್ರಯತ್ನಿಸಿ ಹಿಂದಕ್ಕೆ ಬಿದ್ದು ) ಮಂಡೋದರಿ ! ನನ್ನ ಪ್ರಾಣೇಶ್ವರೀ ! ನನ್ನ ಹೃದಯಲ್ಲಿ ಈಗಿರುವದು ನಿನ್ನ ಮೂರ್ತಿಯೊಂದೇ. ನೀನು ಮೊದಲೇ ರಣರಂಗಕ್ಕೆ ಬಂದಿದ್ದರೆ ನಾನೇ ಜಯಿಸುತ್ತಿದ್ದೆನೋ ಏನೋ ? ನಿನಗೂ ತೋರಲಿಲ್ಲ ನಾನೂ ಕೇಳಲಿಲ್ಲ......... ಮಾಯೆಯ ಕಾವಳ ........ ನಾನು ನಿನ್ನಲ್ಲಿಯೂ ಸೀತೆಯಲ್ಲಿಯೂ ಎಷ್ಟು ಅಪರಾಧಿ ! ಮಂಡೋದರಿ ! ಮಂಡೋದರಿ ! ........ ( ಸಂಕಟ ಪಡುವನು. ಪರಿಜನರು ಬಲವಾಗಿ ಗಾಳಿ ಹಾಕುವರು. )

**ಮಂಡೋದರಿ** :—( ಕಂಬನಿದುಂಬಿ ) ಆರ್ಯಪುತ್ರಾ ! ನಿನ್ನೀ ಅವಸ್ಥೆಯನ್ನು ನೋಡಲಾರೆ. ನಿನ್ನ ಪ್ರೇಮಕ್ಕೆ ಪಾತ್ರಳಾದ ನಾನೇ ಧನ್ಯಳು. ನನ್ನ ಜೀವನದ ಚೈತನ್ಯವೇ ನೀನು ! ನನ್ನ ಕಥೆಯು ಮುಗಿಯುತ್ತ ಬಂದಿತು. ( ಸೀತಾದೇವಿಯು ಕಣ್ಣೀರನ್ನು ಸುರಿಸುತ್ತ ಆವಳನ್ನು ಆಲಿಂಗಿಸಿ ಹಿಡಿದುಕೊಳ್ಳುವಳು. ) ತಂಗಿ ! ಸೀತಾದೇವಿ ! ಆಲಿಂಗಿಸು ತಾಯಿ. ಈ ಸುಖವು ಪರಲೋಕದಲ್ಲೆಲ್ಲಿ ದೊರೆಯುವದು ? ನನ್ನನ್ನು ಬಿಗಿಯಾಗಿ ಅಪ್ಪು. ( ಸಂಕಟ ಸಂಕಟ ).

**ಸೀತಾದೇವಿ** :- ಅಯ್ಯೋ ! ಇದನ್ನು ನೋಡಿ ನಾನು ಸೈರಿಸಲಾರೆನು.

**ಮಂಡೋದರಿ** :—ತಂಗೀ ! ಎಲ್ಲವೂ ಸರ್ವಮಂಗಳೆಯ ಲೀಲೆ.

**ಸೀತಾದೇವಿ** :—( ಬಿಕ್ಕಿ ಬಿಕ್ಕಿ ಅಳುತ್ತಾ ಮಂಡೋದರಿಯ ಕಂಠವನ್ನಾಲಿಂಗಿಸಿ ) ಅಕ್ಕಾ! ನೀನು ಪ್ರೀತಿಮಯಿ. ಸ್ನೇಹಮಯಿ. ವಿಶ್ವಪ್ರೇಮಿಯಾದ ದೇವಿ! ನಿನ್ನನ್ನು ಕಳೆದುಕೊಳ್ಳುವ ನಾವೆಲ್ಲರೂ ಹತಭಾಗ್ಯರು ಅಯ್ಯೋ!!

**ಮಂಡೋದರಿ** :—( ಪತಿಯ ಪಾದಗಳ ಮೇಲೆ ತಲೆಯನ್ನಿಟ್ಟು ) ಪ್ರಾಣನಾಥಾ! ಇದೇ ಈ ದಿವ್ಯಪಾದಗಳಿಗೆ ನನ್ನ ಕೊನೆಯ ವಂದನೆಗಳು. ಜನ್ಮಜನ್ಮಾಂತರಗಳಲ್ಲಿಯೂ ನೀನೇ ನನಗೆ ಪತಿಯಾಗು. ಪುಣ್ಯವಿದ್ದರೆ ಲಂಕೆಯಲ್ಲೇ ನಮಗೆ ಜನ್ಮವಾಗಲಿ! ( ಸಂಕಟಪಡುವಳು ).

**ರಾವಣ** :— ಹೃದಯೇಶ್ವರಿ! ನಾನೇ ನಿನಗೆ ಮೃತ್ಯುವಾದೆನು. ಮಂಡೋದರಿ! ಮಂಡೋದರಿ! ನೀನು ನನ್ನ ಜೀವದ ಗೆಳತಿಯಾಗಿದ್ದೆ. ನನ್ನ ಹೃದಯದ ಬೆಳಕಾಗಿದ್ದೆ. ಜಗತ್ತಿಗೆ ಜೀವರತ್ನವಾಗಿದ್ದೆ. ( ನರಳುವನು )

**ಮಂಡೋದರಿ** :—ಪ್ರಾ...ಣ....ನಾ....ಥಾ. ಹಾಗೆನ್ನ ಬೇಡ ನೀನೇ ನನ್ನ ಸರ್ವ ಸೌಭಾಗ್ಯ. ಸಂ-ಕ–ಟ ( ಸುಮ್ಮನಾಗುವಳು ).

**ಸೀತಾದೇವಿ** :— ( ಕಂಬನಿದುಂಬಿ ಮಂಡೋದರಿಯನ್ನಾಲಿಂಗಿಸಿ ) ಅಕ್ಕಾ! ನನ್ನನ್ನು ಬಿಟ್ಟು ಎಲ್ಲಿಗೆ ಹೋಗುವಿ?

**ಮಂಡೋದರಿ** :— ( ಮಾತನಾಡಲು ಯತ್ನಿಸಿ ಸಂಕಟದಿಂದ ) ತಂಗಿ! .... .... ( ಮುಂದೆ ಮಾತನಾಡಲು ಪ್ರಬಲವಾಗಿ ಪ್ರಯತ್ನಿಸಿ, ಸಾಧ್ಯವಿಲ್ಲದೆ ಪ್ರಾಣವನ್ನು ಬಿಟ್ಟಳು. )

**ರಾವಣ**:—( ಬಹು ಸಂಕಟದಿಂದ ) ಮಂ....ಡೋ....ದ... ರಿ! ನಿನ್ನ ಮಾತು ನಾನು ಕೇಳಲಿಲ್ಲ. ( ಮುಂದೆ ಮಾತು ಹೊರಡದೆ ಮಂಡೋದರಿಯ ಕಡೆಗೆ ದೃಷ್ಟಿಸಿ ನೋಡುತ್ತಾ, ಕಂಬನಿದುಂಬಿ ಕೈ ಮುಗಿದು ಪ್ರಾಣ ಬಿಟ್ಟನು ).

---

# ಸಾವಿತ್ರಿ ಸತ್ಯವಾನ



ಮದ್ರದೇಶದಲ್ಲಿ ಅಶ್ವಪತಿಯೆಂಬ ದೊರೆಯಿದ್ದನು. ಆತನು ಮಕ್ಕಳಿಲ್ಲದ್ದರಿಂದ ತಪಸ್ಸುಮಾಡಿ ಬಹು ದಿನಗಳ ಮೇಲೆ ಒಂದು ಹೆಣ್ಣು ಮಗುವನ್ನು ಪಡೆದನು. ಅವಳ ಹೆಸರೇ ಸಾವಿತ್ರಿದೇವಿ. ಅವಳು ರೂಪಿನಲ್ಲಿ ಬಹು ಸುಂದರಿಯಾಗಿದ್ದಳು. ಅದರಂತೆ ವಿದ್ಯೆಯಲ್ಲಿಯೂ ಪ್ರವೀಣಳಾಗಿದ್ದಳು. ಕ್ರಮೇಣ ಸಾವಿತ್ರಿಗೆ ಮದುವೆಯ ವಯಸ್ಸು ಪ್ರಾಪ್ತವಾಯಿತು. ಅಶ್ವಪತಿಯು ಸಾವಿತ್ರಿಗೆ ವರನನ್ನು ಹುಡುಕಲು, ಆಕೆಗೆ ತಕ್ಕ ವರನು ಎಲ್ಲಿಯೂ ಸಿಕ್ಕಲಿಲ್ಲ. ಮಗಳನ್ನೇ ಗಂಡನನ್ನು ಹುಡಿಕಿಕೊಂಡು ಬರಲು ತಕ್ಕ ಪರಿವಾರದೊಡನೆ ಕಳುಹಿಸಿ ಕೊಟ್ಟನು.

ಸಾವಿತ್ರಿಯು ದೇಶ ದೇಶಗಳನ್ನೆಲ್ಲಾ ಸುತ್ತಿ ಬಳಲಿ ಒಬ್ಬರೂ ಮನಸ್ಸಿಗೆ ಬಾರದೆ, ಕೊನೆಗೆ ಒಬ್ಬ ಋಷಿಯ ಆಶ್ರಮಕ್ಕೆ ಬಂದಳು. ಅಲ್ಲಿ ರಾಜ್ಯವನ್ನು ಕಳಕೊಂಡು ಕಷ್ಟದಲ್ಲಿ ಸಿಕ್ಕಿದ್ದ ಕುರುಡನಾದ **ದ್ಯುಮತ್ಸೇನನೆಂಬ** ಒಬ್ಬ ದೊರೆಯೂ, ದೊರೆಯ ಪತ್ನಿಯೂ ಇದ್ದರು. ಇವರಿಗೆ ಬಹು ರೂಪವಂತನೂ ವಿದ್ಯಾವಂತನೂ ಮತ್ತು ಗುಣವಂತನೂ ಆದ ಪ್ರಾಯಸ್ಥ ಮಗನೊಬ್ಬನಿದ್ದನು. ಅವನ ಹೆಸರು **ಸತ್ಯವಾನ.** ಅವನನ್ನು ನೋಡಿದ ಕೂಡಲೇ ಸಾವಿತ್ರಿಯು "ಸೂಜಿಕಲ್ಲು ಪುರುಷನ ಕಂಡ ಕೂಡಲೆ ಸೋಂಕುವಂತೆ ಸತ್ಯವಾನನ ಹೃದಯದೊಳು ಬೆರತಳು. ಅವನನ್ನು ವರಿಸಿ ಮದುವೆಗೆ ಒಪ್ಪಿಕೊಂಡು, ಮದ್ರದೇಶಕ್ಕೆ ತಿರುಗಿ ಬಂದು ತಂದೆಗೆ ಎಲ್ಲವನ್ನೂ ಹೇಳಿದಳು. ತಂದೆಯು ಸಂತೋಷಪಟ್ಟು ಮದುವೆಗೆ ಎಲ್ಲಾ ಅಣಿಮಾಡುತ್ತಿದ್ದನು.

ಆಗ **ನಾರದ ಮಹರ್ಷಿಗಳು** ಬಂದು ದೊರೆಯನ್ನು ಕಂಡು, "ಸತ್ಯವಾನನು ಅಲ್ಪಾಯು. ಇನ್ನು ಒಂದು ವರ್ಷ ಮಾತ್ರ ಬದುಕಿರುವನು." ಎಂದು ಹೇಳಿದರು. ಇದನ್ನು ಕೇಳಿ ದೊರೆಯು ಹೆದರಿ ಸಾವಿತ್ರಿಗೆ ಈ ವಿಷಯ

ವನ್ನು ತಿಳಿಸಿ ಬೇರೆ ವರನನ್ನು ಹುಡುಕೆಂದು ಹೇಳಿದನು. ಆಗ ಸಾವಿತ್ರಿಯು "ತಂದೆಯೇ ಒಬ್ಬನನ್ನು ಒಪ್ಪಿ ವರಿಸಿದ ವೇಲೆ ಬೇರೊಬ್ಬನ ಯೋಚನೆ ಏಕೆ? ಬಂದದ್ದು ಬರಲಿ. ಸತ್ಯವಾನನನ್ನಲ್ಲದೆ ಯಾರನ್ನೂ ನಾನು ವಿವಾಹ ಮಾಡಿಕೊಳ್ಳುವುದಿಲ್ಲ." ಎಂದು ದೃಢಮನಸ್ಸಿನಿಂದ ಹೇಳಿದಳು. ಆಗ ದೊರೆಯು ಬೇರೆ ಮಾರ್ಗವಿಲ್ಲದೆ ಸಾವಿತ್ರಿಯನ್ನು ಸತ್ಯವಾನನಿಗೆ ಕೊಟ್ಟು ಬಹಳ ವಿಜೃಂಭಣೆಯಿಂದ ಮದುವೆ ಮಾಡಿದನು. ಅನಂತರ ಸತ್ಯವಾನನ ಜೊತೆಯಲ್ಲಿ ಸಾವಿತ್ರಿಯು ತನ್ನ ಅತ್ತೆ-ಮಾವಂದಿರು ಇರುವ ಆಶ್ರಮಕ್ಕೆ ಹೋಗಿ, ಅಲ್ಲಿ ಅವರ ಸೇವೆಯನ್ನು ಮಾಡಿಕೊಂಡು ಸುಖದಿಂದಿದ್ದಳು.

ಹೀಗಿರಲು ಸತ್ಯವಾನನ ಮೃತ್ಯುದಿನ ಸಮೀಪಿಸಿತು. ಆದರೆ ಇದು ಸತ್ಯವಾನನಿಗೆ ನೆನಪಿಲ್ಲ. ಸಾವಿತ್ರಿಯು ಮಾತ್ರ ಇಂದು ಸತ್ಯವಾನನ ಮರಣ ದಿನವೆಂದು ತಿಳಿದಿದ್ದಳು ಆ ದಿನ ಸತ್ಯವಾನನು ದೇವರ ಪೂಜೆಯನ್ನು ತೀರಿಸಿಕೊಂಡು ಸೌದೆಯನ್ನು ತರಲು ಕಾಡಿಗೆ ಹೊರಟನು **ಗೌರೀಪೂಜೆ** ಯನ್ನು ಮಾಡಿಕೊಂಡು ಸಾವಿತ್ರಿಯು ಪತಿಯ ಜೊತೆಗೆ ಹೊರಟಳು. ಸತ್ಯವಾನನು ಬೇಡವೆಂದು ಎಷ್ಟು ಹೇಳಿದರೂ ಒಪ್ಪಲಿಲ್ಲ. ಕೊನೆಗೆ ಏನೂ ತೋರದೆ ಸಾವಿತ್ರಿಯನ್ನು ಕರೆದುಕೊಂಡು ಕಾಡಿಗೆ ಹೋದನು.

ಸತಿಪತಿಗಳಿಬ್ಬರೂ ಕಟ್ಟಿಗೆಯನ್ನು ಆರಿಸಿ ಹೊರೆಯನ್ನು ಕಟ್ಟಿದರು. ಸ್ವಲ್ಪ ಹೊತ್ತಾದ ಮೇಲೆ ಕೆಲಸದಿಂದ ಬಳಲಿಕೆಯಾಗಿ ಸತ್ಯವಾನನು ಸಾವಿತ್ರಿಯನ್ನು ಕುರಿತು "ನನಗೆ ಏಕೋ ಸಂಕಟವಾಗುವದು. ತಲೆಯು ನೋಯುತ್ತಿದೆ," ಎನ್ನಲು ಸಾವಿತ್ರಿಯು ತನ್ನ ತೊಡೆಯ ಮೇಲೆ ಸತ್ಯವಾನನ ತಲೆಯನ್ನಿಟ್ಟುಕೊಂಡು ಕೂತು ಗಾಳಿಯನ್ನು ಬೀಸಿದಳು. ಸತ್ಯವಾನನಿಗೆ ಕೆಲಹೊತ್ತಿನ ಮೇಲೆ ನಿದ್ರೆ ಹತ್ತಿತು. ಎಲ್ಲವನ್ನೂ ಅರಿತಿದ್ದ ಸಾವಿತ್ರಿಯು ಸತ್ಯವಾನನ ಮುಖವನ್ನು ಎವೆಯಿಕ್ಕದೆ ನೋಡುತ್ತಾ ಕುಳಿತಳು. ಸ್ವಲ್ಪ ಹೊತ್ತಿನ ಮೇಲೆ ಸತ್ಯವಾನನು ಮುಚ್ಚಿದ ಕಣ್ಣನ್ನು ತೆರೆಯಲಿಲ್ಲ ನೋಡ್ತು ನೋಡುವಷ್ಟರಲ್ಲಿ ಸತ್ಯವಾನನು ಉಸುರಾಡಿಸುವದು ನಿಂತಿತು. ಸಾವಿತ್ರಿಯು ಸತ್ಯವಾನನ ಪ್ರಾಣಜ್ಯೋತಿಯು ಎತ್ತ ಹೋಗುವದೆಂಬ ನಿರೀಕ್ಷಣೆಯಲ್ಲಿದ್ದಳು. ಆ ಸಮಯಕ್ಕೆ ಸರಿಯಾಗಿ ಯಮದೂತರು ಅವನ ಪ್ರಾಣವನ್ನು

ಸೆಳೆದುಕೊಂಡು ಹೋಗಲು ಬಂದರು. ಸಾವಿತ್ರಿಯ ಪತಿಭಕ್ತಿಯನ್ನು ನೋಡಿ ಹೆದರಿ ಅವರು ಹಾಗೇ ಯಮನ ಬಳಿಗೆ ಮರಳಿದರು. ಅನಂತರ ಯಮನು ಸತ್ಯವಾನನ ಪ್ರಾಣವನ್ನು ತೆಗೆದುಕೊಂಡು ಹೋಗಲು ಬಂದನು. ಆತನನ್ನು ಕಂಡು ಸಾವಿತ್ರಿಯು ನೀನು ಯಾರೆಂದು ಪ್ರಶ್ನೆ ಮಾಡಿದಳು. ಅದಕ್ಕೆ ಆತನು "ನಾನು ಯಮ" ನೆಂದು ಹೇಳಿದನು.

**ಸಾವಿತ್ರಿ:**— ಅಯ್ಯಾ, ನೀನು ಇಲ್ಲಿಗೇಕೆ ಬಂದೆ ?

**ಯಮ :**—ಅಮ್ಮಾ! ನಿನ್ನ ಗಂಡನ ಆಯುಷ್ಯ ಮುಗಿಯಿತು. ಪರ ಲೋಕಕ್ಕೆ ಅವನನ್ನು ಕರೆದುಕೊಂಡು ಹೋಗಲು ಬಂದಿದ್ದೇನೆ.

**ಸಾವಿತ್ರಿ :**—ಅಯ್ಯಾ ! ನಿನಗೆ ನಮಸ್ಕರಿಸಿ ಹೇಳುವೆನು. ನನ್ನ ಗಂಡನನ್ನು ಒಯ್ಯಬೇಡ.

**ಯಮ :**—ತಾಯೀ ! ಸತ್ತವರನ್ನು ಬಿಡಲಾರೆ. ಆಯುಷ್ಯವಿರುವವರನ್ನು ಮುಟ್ಟಲಾರೆ. ಸುಮ್ಮನೇಕೆ ಶ್ರಮಪಡುತ್ತೀಯೆ ?

**ಸಾವಿತ್ರಿ :**—ಯಮದೇವಾ ! ನಿನ್ನನ್ನು ಕೈ ಮುಗಿದು ಬೇಡುವೆನು. ನಿನ್ನ ಮಗಳೆಂದು ಕನಿಕರವಿಟ್ಟು ನನ್ನ ಗಂಡನನ್ನು ಉಳಿಸಿಕೊಡು. ಅವನನ್ನು ನಾನು ಬಿಟ್ಟಿರಲಾರೆ. ಹೆಂಡತಿ ಗಂಡನಿಗೆ ಅರ್ಧಾಂಗಿಯಲ್ಲವೇ ? ನನ್ನನ್ನು ಅವನ ಜೊತೆಯಲ್ಲಿ ಎಳೆದುಕೊಂಡು ಹೋಗು. ನನ್ನ ಗಂಡನ ಜೊತೆಯಲ್ಲಿ ನಾನೂ ಬರುವೆನು ಎಂದು ಬೆನ್ನು ಹತ್ತಿದಳು. ಎಷ್ಟು ಬಗೆಯಿಂದ ಯಮನು ಸಮಾಧಾನ ಹೇಳಿದರೂ ಸಾವಿತ್ರಿಯು ಕೇಳಲಿಲ್ಲ. ಆಗ ಯಮನು ಸಾವಿತ್ರಿಯ ಪತಿಭಕ್ತಿಗೆ ಮೆಚ್ಚಿ, ತಾಯೀ, ನಿನ್ನ ಮಾತುಗಳಿಗೆ ಮೆಚ್ಚಿದೆನು. ನಿನ್ನ ಗಂಡನ ಪ್ರಾಣದ ಹೊರತು ಏನುಬೇಕು ? ಒಂದು ವರವನ್ನು ಬೇಡೆಂದನು.

**ಸಾವಿತ್ರಿ :**—ನನ್ನ ಮಾವನಿಗೆ ಕಣ್ಣು ಬರಲಿ.

**ಯಮ :**—ಆಗಲಿ ವರವನ್ನು ಕೊಟ್ಟಿದ್ದೇನೆ.

ಹೀಗೆಂದು ಹೇಳಿ ಯಮನು ಮುಂದೆ ಸಾಗಿದನು. ಸಾವಿತ್ರಿಯು ಮತ್ತೆ ಬೆನ್ನು ಹತ್ತಿದಳು.

**ಯಮ :**—ನನ್ನ ಹಿಂದೆ ಯಾಕಮ್ಮಾ! ಬರುತ್ತೀಯೆ ?

**ಸಾವಿತ್ರಿ :**—ನಿನ್ನ ಹಿಂದೆ ನಾನು ಬರುವದಿಲ್ಲ. ನನ್ನ ಗಂಡನ ಹಿಂದೆ ಬರುತ್ತಿದ್ದೇನೆ. ಧರ್ಮರಾಜನಾದ ನಿನಗೆ ಇದು ಗೊತ್ತಿಲ್ಲವೇ ? ಹೆಂಡತಿಗೆ ಗಂಡನೆ ದೇವರು. ಗಂಡನೇ ಸರ್ವಸ್ವ. ಗಂಡನನ್ನು ನಾನು ಬಿಟ್ಟಿರಲಾರೆ.

**ಯಮ :**—ಅಮ್ಮಾ! ನಿನ್ನ ಭಕ್ತಿಗೆ ಮೆಚ್ಚಿದೆನು. ಗಂಡನ ಪ್ರಾಣವನ್ನು ಬಿಟ್ಟು ಮತ್ತೊಂದು ವರವನ್ನು ಕೇಳಿಕೊ.

**ಸಾವಿತ್ರಿ:**— ನನ್ನ ಮಾವನಿಗೆ ಹೋದ ರಾಜ್ಯ ಹಿಂತಿರುಗಿ ಬರುವಂತೆ ಮಾಡು.

**ಯಮ:**— ಕೊಟ್ಟಿದ್ದೇನೆ, ಇನ್ನು ನೀನು ಮನೆಗೆ ಹೋಗು. ಎಂದು ಯಮನು ಮುಂದಕ್ಕೆ ಹೊರಟನು. ಸಾವಿತ್ರಿ ಮತ್ತೆ ಯಮನ ಹಿಂದೆ ಹೊರಟಳು.

**ಯಮ:**—ತಾಯಿ ! ಇನ್ನು ನನ್ನನ್ನು ಹಿಂಬಾಲಿಸಬೇಡ. ಹಿಂದಕ್ಕೆ ತೆರಳು.

**ಸಾವಿತ್ರಿ:**— ನೀನು ಏನು ಬೇಕಾದರೂ ಹೇಳು. ನನ್ನ ಗಂಡನನ್ನು ಎಂದಿಗೂ ಬಿಟ್ಟಿರಲಾರೆ. ಎಲ್ಲಿಗಾದರೂ ಸರಿಯೆ ಅವನ ಜೊತೆಯಲ್ಲಿಯೇ ಬರುವೆನು ಎಂದಳು.

ಸಾವಿತ್ರಿಯ ಉಗ್ರವಾದ ಪತಿ ಭಕ್ತಿಯನ್ನು ಮೆಚ್ಚಿ ಇನ್ನೇನು ತೋರದೆ ಯಮನು ಸಾವಿತ್ರಿಯನ್ನು ಕುರಿತು— ಅಮ್ಮಾ ! ಇನ್ನೊಂದು ವರವನ್ನು ಕೇಳಿಕೊ. ನಿನ್ನ ಪತಿಯ ಪ್ರಾಣದ ಹೊರತಾಗಿ ಎಂದನು.

**ಸಾವಿತ್ರಿ :**— ನನಗೆ ಪುತ್ರ ಸಂತಾನವಾಗಬೇಕು.

**ಯಮ:**— ಹಾಗೆಯೇ ಆಗಲಿ. ವರವನ್ನು ಕೊಟ್ಟಿದ್ದೇನೆ. ಎಂದು ಯಮನು ಮುಂದೆ ಹೊರಟನು. ಮತ್ತೆ ಸಾವಿತ್ರಿ ಹಿಂದೆ ಹೊರಟಳು. ಆಗ ಯಮನು ತಿರುಗಿನೋಡಿ, ಸಾವಿತ್ರೀ ! ಇನ್ನು ನೀನು ಖಂಡಿತವಾಗಿಯೂ ಬರಕೂಡದು. ನೀನು ಬೇಡಿದ ವರಗಳನ್ನು ಕೊಟ್ಟಿದ್ದೇನೆ. ಮತ್ತೇನು ? ಎಂದನು.

**ಸಾವಿತ್ರಿ** :—ದೇವಾ ! ಬರಲು ನನಗೆ ಇಚ್ಛೆಯಿಲ್ಲ. ಆದರೆ ನಿನ್ನ ವರವು ಸಿದ್ಧಿಸಿ ನನಗೆ ಪುತ್ರಸಂತಾನವಾಗಬೇಕಾದರೆ, ನನ್ನ ಗಂಡನಿಲ್ಲದೆ ಹೇಗೆ ಆಗುವದು ? ಎಂದು ಕೇಳಲು, ಯಮನು ಸೋತನು. ಸಾವಿತ್ರಿಯ ಪತಿಭಕ್ತಿಗೆ ಮೆಚ್ಚಿದನು. ಆಕೆಯ ಪತಿಯ ಪ್ರಾಣವನ್ನು ಬಿಡುಗಡೆ ಮಾಡಿದನು. ಧೀರ್ಘ ಸುಮಂಗಲಿಯಾಗಿರೆಂದು ಹರಸಿ ಹೊರಟು ಹೋದನು.

ಮಲಗಿದ್ದ ಸತ್ಯವಾನನು ಎಚ್ಚತ್ತು ನಡೆದ ಎಲ್ಲ ವೃತ್ತಾಂತಗಳನ್ನು ಸಾವಿತ್ರಿಯ ಬಾಯಿಂದ ಕೇಳಿ ಹರುಷಿತನಾದನು. ಇಬ್ಬರೂ ಆಶ್ರಮಕ್ಕೆ ತಿರುಗಿ ಬರುವದರೊಳಗಾಗಿ ಮಾವನಿಗೆ ಕಣ್ಣುಗಳೂ, ರಾಜ್ಯವೂ ಪ್ರಾಪ್ತವಾಗಿತ್ತು. ಸೊಸೆಯಿಂದ ಮಗನ ಪ್ರಾಣವೂ, ರಾಜ್ಯಸಂಪತ್ತೂ, ಕಣ್ಣುಗಳೂ, ಬಂದುದನ್ನು ಕೇಳಿದ, ಆ ಸಾವಿತ್ರಿಯ ಅತ್ತೆ ಮಾವಂದಿರು ಹಿರಿಹಿರಿ ಹಿಗ್ಗಿದರು. ಅಂತೆಯೇ ಸಾವಿತ್ರಿಯು ಸತ್ಯವಾನನೊಡನೆ ಚಿರಕಾಲ ಸುಖವಾಗಿದ್ದು, ಅಂತ್ಯದಲ್ಲಿ ಇಬ್ಬರು ಜೋಡಾಗಿಯೇ ಪರಲೋಕಕ್ಕೆ ತೆರಳಿದರು.

---

# ದಮಯಂತಿ



ನಿಷಧದೇಶದಲ್ಲಿ **ನಳ** ನೆಂಬ ದೊರೆಯು ಆಳುತ್ತಿದ್ದನು. ಪಕ್ಕದ ರಾಜ್ಯವಾದ ವಿದರ್ಭದೇಶವಲ್ಲಿ **ಭೀಮಶೇನ**ನೆಂಬ ರಾಜನಿದ್ದನು. ಅವನಿಗೆ ಬಹಳ ಸುಂದರಿಯಾದ ಮಗಳಿದ್ದಳು. ಅವಳ ಹೆಸರು **ದಮಯಂತಿ.** ನಳ ಮಹಾರಾಜನು ಸರ್ವಾಂಗ ಸುಂದರನು. ಅರವತ್ತುನಾಲ್ಕು ವಿದ್ಯೆಗಳನ್ನು ಕಲಿತಿದ್ದನು. ಅಶ್ವರಥಗಳನ್ನು ನಡೆಸುವದರಲ್ಲಿ ಇವನಿಗಿದ್ದ ಪಾಂಡಿತ್ಯ ಮತ್ತೆ ಯಾರಿಗೂ ಇರಲಿಲ್ಲ. ಇವನ ರೂಪು ಲಾವಣ್ಯಗಳನ್ನು ಕೇಳಿ ಬೆರಗಾದ ದಮಯಂತಿಯು, ನಳನನ್ನು ಮದುವೆ ಮಾಡಿಕೊಳ್ಳಲು ಮನಸ್ಸಿನಲ್ಲಿ ನಿಶ್ಚಯಿಸಿದಳು. ತಂದೆಯು ದಮಯಂತಿಯ ಸ್ವಯಂವರಕ್ಕೋಸ್ಕರ ಒಂದು ಶುಭದಿನವನ್ನು ಗೊತ್ತುಮಾಡಿದನು. ದೇಶದೇಶದ ರಾಜಕುಮಾರರಿಗೆ ವರ್ತಮಾನವನ್ನು

ಕಳುಹಿಸಿದನು. ಆಗ ಅನೇಕ ದೇಶದ ರಾಜಕುಮಾರರು ನಾ ಮುಂದೆ ತಾ ಮುಂದೆ ಯೆಂದು ದಮಯಂತಿಯನ್ನು ವರಿಸಲು ಬಂದರು. ದಮಯಂತಿಯು ಕೈಯ್ಯಲ್ಲಿ ಪುಷ್ಪಹಾರವನ್ನು ಹಿಡಿದು ಸ್ವಯಂವರ ಮಂಟಪದಲ್ಲಿ ಬಂದಳು. ರಾಜಪುತ್ರರನ್ನು ನೋಡಿ ಅವರೊಳಗೆ ನಳನು ಎಲ್ಲಿ ಕೂತಿರುವನೋ ಎಂದು ಹುಡುಕಿ, ನಳನ ಕೊರಳಿಗೆ ಮಾಲೆಯನ್ನು ಹಾಕಿದಳು. ಮುಂದೆ ಅವರ ಲಗ್ನವು ಬಹು ವಿಜೃಂಭಣೆಯಿಂದ ಸಾಗಿತು.

ಆ ಮೇಲೆ ನಳನು ದಮಯಂತಿಯನ್ನು ನಿಷಧರಾಜ್ಯಕ್ಕೆ ಕರೆದುಕೊಂಡು ಬಂದು ಧರ್ಮದಿಂದ ರಾಜ್ಯವಾಳುತ್ತಿದ್ದನು. ಎಲ್ಲರೂ ಅತನನ್ನು ಪುಣ್ಯಶಾಲಿಯೆಂದು ಕರೆಯುತಿದ್ದರು ನಳ–ದಮಯಂತಿಯರಿಗೆ ಒಂದು ಗಂಡು ಮಗುವೂ ಒಂದು ಹೆಣ್ಣು ಮಗುವೂ ಹುಟ್ಟಿದವು. ನಳನು ಎಷ್ಟೇ ವಿದ್ಯಾವಂತನಾದರೂ ಮತ್ತು ಧರ್ಮವ್ರತನಾದರೂ ಅವನಿಗೆ ಪಗಡೆ ಜೂಜಿನಲ್ಲಿ ಬಹಳ ಆಸೆ. ಅವನಿಗೆ ಪುಷ್ಕರನೆಂಬ ಒಬ್ಬ ದುಷ್ಟ ತಮ್ಮನಿದ್ದನು. ಅವನು ಒಮ್ಮೆ ಅಣ್ಣನನ್ನು ಜೂಜಿಗೆ ಕರೆದನು. ನಳನು ಜೂಜಿನಲ್ಲಿ ತನ್ನ ರಾಜ್ಯ ಸರ್ವಸ್ವವನ್ನು ಕಳೆದುಕೊಂಡನು. ಪುಷ್ಕರನು ರಾಜ್ಯವನ್ನಪಹರಿಸಿ ನಳ–ದಮಯಂತಿಯರನ್ನು ಕಾಡಿಗೆ ಅಟ್ಟಿದನು

ದಮಯಂತಿಯು ತನ್ನ ಮಕ್ಕಳಿಬ್ಬರನ್ನು ತನ್ನ ತೌರೂರಾದ ವಿದರ್ಭದೇಶಕ್ಕೆ ಕಳುಹಿಸಿ ಗಂಡನೊಡನೆ ತಾನೂ ಕಾಡಿಗೆ ಹೊರಟಳು. ನಳನು ದಮಯಂತಿಯನ್ನು ತವರುಮನೆಗೆ ಹೋಗಿ ಸುಖವಾಗಿರು ಎಂದು ಎಷ್ಟು ಹೇಳಿದರೂ ಆಕೆ ಕೇಳಲಿಲ್ಲ. ಆ ರಾತ್ರಿ ಕಾಡಿನಲ್ಲಿ ಗಂಡ-ಹೆಂಡರಿಬ್ಬರೂ ಒಂದು ಗುಹೆಯಲ್ಲಿ ಮಲಗಿದರು ದಮಯಂತಿಗೆ ನಿದ್ದೆ ಹತ್ತಲು ನಳನು ಯೋಚಿಸತೊಡಗಿದನು. "ನನ್ನಿಂದ ಇವಳಿಗೆ ಕಷ್ಟವು ಒದಗಿತು. ನನ್ನನ್ನು ಇವಳು ಅಗಲಿ ಹೋಗುವುದಿಲ್ಲ. ನಾನೇ ಇವಳನ್ನು ಅಗಲಿ ಹೋದರೆ ಹೇಗಾದರೂ ಮಾಡಿ ಈಕೆ ವಿದರ್ಭದೇಶವನ್ನು ಸೇರಿ ಸುಖವಾಗಿರುವಳು." ಎಂದು ಉಡಲಿಕ್ಕೆ ಬಟ್ಟೆಯಿಲ್ಲದ್ದರಿಂದ ಆಕೆಯ ಸೀರೆಯನ್ನು ಹರಿದು, ತಾನೊಂದು ತುಂಡನ್ನು ಉಟ್ಟುಕೊಂಡು, ಮಲಗಿದ್ದ ಹೆಂಡತಿಯನ್ನು ಬಿಟ್ಟು ಹೊರಟನು ಬಿಟ್ಟು ಹೋಗಲಾರದೆ ಮರಳಿ ಬಂದನು. ಮರಳಿ ಹೊರಟನು. ಹೀಗೆ

ಅನೇಕ ಬಾರಿ ಮಾಡಿ ಕೊನೆಗೆ ಮನಸ್ಸನ್ನು ಗಟ್ಟಿಮಾಡಿ ಹೆಂಡತಿಯನ್ನು ಬಿಟ್ಟು ಹೊರಟು ಹೋದನು.

ಬೆಳಗಾದ ಮೇಲೆ ತನ್ನ ಪಕ್ಕದಲ್ಲಿ ಮಲಗಿದ್ದ ನಳನು ಇಲ್ಲದಿರುವದನ್ನು ನೋಡಿ ದಮಯಂತಿ ಬೆದರಿದಳು. ಘಾಬರಿಯಿಂದ ಕಾಡಿನಲ್ಲಿ ನಳನನ್ನು ಹುಡುಕಲು ಹೊರಟಳು. ಎಲ್ಲಿಯೂ ನಳನ ಸುಳುವಿಲ್ಲದುದನ್ನು ಕಂಡು ಅತಿಯಾಗಿ ಅತ್ತಳು. ಹಸಿವು ನಿದ್ದೆ ನೀರಡಿಕೆಯಿಲ್ಲದೆ ಕಾಡಿನಲ್ಲಿ ಅಲೆದಲೆದು ಬೆಂಡಾದಳು. ಹೀಗೆ ಕಾಡಿನಲ್ಲಿ ಅಲೆದಾಡುತ್ತಿರುವಾಗ ಒಂದು ಘಟಸರ್ಪವು ಅವಳನ್ನು ಸುತ್ತಿಕೊಂಡಿತು. ದಮಯಂತಿಯು ಬೆದರಿ ಚಿಟ್ಟನೆ ಚೀರಿದಳು. ಹತ್ತರವಿದ್ದ ಬೇಟೆಗಾರನು ಆ ಹಾವನ್ನು ಕೊಂದು ದಮಯಂತಿಯನ್ನು ಉಳಿಸಿದನು. ಬಳಿಕ ಅವಳ ರೂಪವನ್ನು ನೋಡಿ ಮೋಹಿಸಿ ಮುಟ್ಟಲು ಹೋದನು. ದಮಯಂತಿ ತನ್ನ ಪಾತಿವ್ರತ್ಯದ ಮಹಿಮೆಯಿಂದ ಅವನು ಸಾಯಲೆಂದು ಶಪಿಸಿದಳು. ತಕ್ಷಣವೇ ಅವನು ಬಿದ್ದು ಪ್ರಾಣವನ್ನು ಬಿಟ್ಟನು.

ಮುಂದೆ ದಮಯಂತಿಯು ನಳನನ್ನು ಹುಡುಕುತ್ತಾ ಕಂಡ ಕಂಡ ಪಕ್ಷಿಪ್ರಾಣಿಗಳಿಗೆ ಪ್ರಶ್ನೆ ಮಾಡುತ್ತಾ, ಕೊನೆಗೆ ಕೆಲವು ವರ್ತಕರ ಸಹಾಯದಿಂದ ಸ್ವಲ್ಪ ದೂರ ಬಂದಳು. ಅವರು ಸಹಾ ಆಕೆಯನ್ನು ನಡು ದಾರಿಯಲ್ಲಿಯೇ ಬಿಟ್ಟು ಹೋದರು. ಕೊನೆಗೆ ದಮಯಂತಿಯು ಒಬ್ಬಳೇ ಕಾಡಿನಲ್ಲಿ ಅಲೆದಲೆದು ಕಂಗೆಟ್ಟು ಚೇದಿ ದೇಶವನ್ನು ಸೇರಿ, ಅಲ್ಲಿಯ ಅರಮನೆಯ ಮುಂದೆ ಚಿಂದಿಬಟ್ಟೆಯಲ್ಲಿ ಕೆದರಿದ ತಲೆಯಲ್ಲಿ ನಿಂತಿದ್ದಳು. ಆ ದೇಶದ ರಾಣಿಗೆ ಈ ವಿಷಯ ತಿಳಿದು ದಮಯಂತಿಯನ್ನು ಅರಮನೆಯೊಳಕ್ಕೆ ಕರಸಿಕೊಂಡಳು. ಅವಳ ವೃತ್ತಾಂತವನ್ನೆಲ್ಲಾ ಕೇಳಿ ಮರುಕ ಪಟ್ಟು, ಅರಮನೆಯಲ್ಲೇ ದಮಯಂತಿಯನ್ನು ಇಟ್ಟುಕೊಂಡಳು.

ಸ್ವಲ್ಪ ದಿನಗಳಲ್ಲಿಯೇ ವಿದರ್ಭದೇಶದ ಭೀಮಸೇನನು ನಳ ದಮಯಂತಿಯರನ್ನು ಹುಡುಕಲು ಗೂಢ ಚಾರರನ್ನು ಕಳುಹಿಸಿದನು. ಅವರಿಂದ ತನ್ನ ಮಗಳು ಚೇದಿ ದೇಶದ ಅರಮನೆಯಲ್ಲಿದ್ದಾಳೆಂದು ಕೇಳಿದ ಕೂಡಲೇ, ದಮಯಂತಿಯನು ವಿದರ್ಭದೇಶಕ್ಕೆ ಕರೆಯಿಸಿಕೊಂಡನು. ಮಗಳ ದುಃಖವನ್ನು

ಕಂಡು ಮರುಗಿದನು. ದಮಯಂತಿ ಮಕ್ಕಳೊಡನೆ ಇದ್ದರೂ ಸದಾ ನಳನ ಧ್ಯಾನದಲ್ಲಿಯೇ ನಿರತಳಾಗಿದ್ದಳು. ಮತ್ತು ಗಂಡನನ್ನು ಹುಡುಕಲು ಗೂಢ ಚಾರರನ್ನು ಕಳುಹಿಸಿದಳು. ಅನುಮಾನ ಬಂದವನೆದುರಿಗೆ "ಎಲ್ಲಿ ಹೋದೆ ಜೂಜುಗಾರ! ಹೆಂಡತಿಯ ಅರ್ಧ ಸೀರೆಯನ್ನುಟ್ಟು, ಅವಳನ್ನು ಏಕೆ ಬಿಟ್ಟು ಹೋದೆ?" ಎಂದು ಪ್ರಶ್ನೆಮಾಡಿ ಏನಾದರೂ ಉತ್ತರ ಕೊಟ್ಟರೆ, ಅದನ್ನು ತನಗೆ ತಿಳಿಸಬೇಕೆಂದು ದಮಯಂತಿ ಗೂಢ ಚಾರರಿಗೆ ಆಜ್ಞೆಯನ್ನು ಮಾಡಿದಳು.

ಇತ್ತ ಹೆಂಡತಿಯನ್ನು ಬಿಟ್ಟು ಹೊರಟು ಸ್ವಲ್ಪ ದೂರ ಹೋಗುವದರೊಳಗಾಗಿ ನಳನು ಒಂದು ಕಾಡುಗಿಚ್ಚನ್ನು ನೋಡಿದನು. ಕಿಚ್ಚಿನೊಳಗೆ ಒಂದು ಘಟಸರ್ಪವು ಸುಟ್ಟುಕೊಂಡು ಸಾಯುವದನ್ನು ನೋಡಿ ಮರುಗಿ, ಅದನ್ನು ಎತ್ತಿ ಹೊರಗೆ ಇಡುವಷ್ಟರಲ್ಲಿ ಅದು ಅವನನ್ನು ಕಚ್ಚಿತು. ಕೂಡಲೇ ವಿಷವೇರಿ ನಳನ ರೂಪವೇ ಬದಲಾಯಿತು ಮುಂದೆ ನಳನು ಋತುಪರ್ಣರಾಯನ ಹತ್ತರ ಹೋಗಿ ಬಾಹುಕನೆಂಬ ಹೆಸರಿನಿಂದ ಸಾರಥಿಯಾಗಿ ಸೇರಿದನು. ಅಲ್ಲಿಗೆ ವಿದರ್ಭದೇಶದಿಂದ ಬಂದ ಗೂಢ ಚಾರರು ನಳನ ಮುಂದೆ ಕೂಡ "ಎಲ್ಲಿ ಹೋದೆ ಜೂಜುಗಾರ! ಹೆಂಡತಿಯ ಅರ್ಧ ಸೀರೆಯನ್ನುಟ್ಟು, ಅವಳನ್ನು ಏಕೆ ಬಿಟ್ಟು ಹೋದೆ?" ಎಂದು ಕೇಳಲು, ಅವರುಗಳ ಮುಂದೆ ನಳನು ಹೆಂಗಸರ ಸಹನೆ, ಸೈರಣೆ, ದಯೆ ಮುಂತಾದ ಗುಣಗಳನ್ನು ಹೊಗಳಿದನು. ಈ ವಿಚಾರವನ್ನು ಗೂಢಚಾರರಾದ ಬ್ರಾಹ್ಮಣರು ದಮಯಂತಿಗೆ ಬಂದು ತಿಳಿಸಿದರು. ಆ ಮಾತುಗಳನ್ನು ಕೇಳಿ ಬಾಹುಕನೇ ನಳನಿರಬಹುದೆಂದು ಊಹಿಸಿ, ಅದಕೊಂದು ಹಂಚಿಕೆಯನ್ನು ಬಗೆದಳು. ಬಾಹುಕನು ನಳನೇ ಆಗಿದ್ದರೆ ಇಲ್ಲಿಗೆ ಬರುವನೆಂದು, "ದಮಯಂತಿಯು ಎರಡನೆಯ ಸ್ವಯಂವರ ನಡೆಯುವದೆಂದು" ಸುದ್ದಿ ಕಳುಹಿಸಿದಳು.

ಋತುಪರ್ಣರಾಯನು ಈ ಸುದ್ದಿಯನ್ನು ಕೇಳಿ ದಮಯಂತಿಯನ್ನು ವರಿಸಲು ಹೊರಟನು. ಬಾಹುಕನಾದ ನಳನು ರಥವನ್ನು ಸಿದ್ಧಗೊಳಿಸಿದನು. ವಾಯುವೇಗದಂತೆ ಹಾರಿಹೋಗುತ್ತಿರುವ ಕುದುರೆಗಳನ್ನು ರಥವನ್ನು ಹಿಡಿದು, ಸಾಮರ್ಥ್ಯದಿಂದ ನಡಸುತಿದ್ದ ನಳನನ್ನು ನೋಡಿ ರಾಜನು ಮೆಚ್ಚಿದನು.

ಸೂರ್ಯ ಸಮಯಕ್ಕೆ ಮುಂಚಿತವಾಗಿ ಋತುಪರ್ಣರಾಯನೂ ಬಾಹುಕನೂ ವಿದರ್ಭನಗರಕ್ಕೆ ಬಂದುದನ್ನು ಕೇಳಿ ದಮಯಂತಿಗೆ ಪರಮಾನಂದವಾಯಿತು. ಮರದಿವಸ ಬೆಳಗ್ಗೆ ದಮಯಂತಿ ಬಾಹುಕನಿಗೆ ಅಡಿಗೆ ಮಾಡುವದಕ್ಕೆ ನೀರು ಸೌದೆ ಅಕ್ಕಿ ತರಕಾರಿ ಯಾವುದನ್ನು ಕೊಡಕೂಡದೆಂದು ಆಜ್ಞೆ ಮಾಡಿದಳು. ಮತ್ತೆ ಅರಮನೆಯ ಕಿಟಕಿಯಿಂದ ಬಾಹುಕನನ್ನು ನೋಡುತ್ತಾ ನಿಂತಳು. ಅರಮನೆಯಲ್ಲಿ ತನ್ನನ್ನು ಸಾಮಾನ್ಯ ಸಾರಥಿಯೆಂದು ಭಾವಿಸಿ ಮರೆತಿದ್ದಾರೆಂದು ನಳನು, ತನ್ನ ಮದುವೆಯ ಕಾಲಕ್ಕೆ ದೇವತೆಗಳು ಕೊಟ್ಟ ಅಕ್ಷಯಪಾತ್ರೆಯನ್ನಿಟ್ಟು ಪೂಜಿಸಿ ದೇವತೆಗಳ ಪ್ರಾರ್ಥಿಸಿದನು. ಕೂಡಲೇ ಎಲ್ಲ ಅಡಿಗೆಯೂ ಸಿದ್ಧವಾಯಿತು.

ಕೂಡಲೇ ದಮಯಂತಿ ಇವನೇ ನಳನಿರಬೇಕು. ಆದರೆ ರೂಪು ಮಾತ್ರ ಬೇರೆಯಾಗಿದೆಯಲ್ಲಾ! ಎಂದು ಯೋಚಿಸುತ್ತಾ ಸೇವಕರ ಮುಖಾಂತರ ನಳನು ಮಾಡಿದ್ದ ಅಡಿಗೆಯನ್ನು ತರಿಸಿ ಉಂಡು ನೋಡಿದಳು. ಅದು ನಿಜವಾಗಿಯೂ ನಳಪಾಕವಾಗಿದ್ದಿತು. ನಳನು ಪಾಕಶಾಸ್ತ್ರದಲ್ಲಿ ಚನ್ನಾಗಿ ನುರಿತವನು. ಆಗ ದಮಯಂತಿಯು ಬಾಹುಕನನ್ನು ಅಂತಃಪುರಕ್ಕೆ ಕರಸಿಕೊಂಡು ವಿಚಾರಿಸಿದಳು. ಎಲ್ಲವೂ ತಿಳಿಯಿತು. ಆದರೆ ರೂಪು ಮಾತ್ರ ಬೇರೆಯಾಗಿದೆಯಲ್ಲಾ ! ಯೆಂದು ಚಿಂತಿಸುತಿದ್ದ ದಮಯಂತಿಗೆ, ದೇವತೆಗಳು ನಳನಿಗೆ ಮೊದಲಿನ ರೂಪು ಬರುವಂತೆ ಮಾಡಿದರು. ಆಗ ದಮಯಂತಿಯು ನಳನ ಪೂರ್ವರೂಪವನ್ನು ಕಂಡು ಪಾದಕ್ಕೆರಗಿದಳು. ನಳನು ದಮಯಂತಿ ಮಕ್ಕಳನ್ನು ತಬ್ಬಿಕೊಂಡನು. ಭೀಮಸೇನನೂ ಮತ್ತು ಋತುಪರ್ಣ ರಾಜನೂ ದಮಯಂತಿಯ ಉಪಾಯವನ್ನು ಮೆಚ್ಚಿ ಸಂತೋಷಪಟ್ಟರು. ಆ ಮೇಲೆ ನಳನು ದಮಯಂತಿ ಮಕ್ಕಳನ್ನು ನಿಷಧ ಪಟ್ಟಣಕ್ಕೆ ಕರದುಕೊಂಡು ಬಂದನು ಪುನಃ ರಾಜ್ಯವನ್ನು ಗೆದ್ದು ಧರ್ಮದಿಂದ ರಾಜ್ಯವನ್ನಾಳಿ ಬಹುಕಾಲ ನಳದಮಯಂತಿಯರು ಜೀವಿಸಿದರು.

# ದ್ರೌಪದಿ



ದ್ರೌಪದಿಯು ಪಾಂಚಾಲದೇಶದ ದ್ರುಪದರಾಜನ ಮಗಳು. ಧರ್ಮ ರಾಜನ ಧರ್ಮಪತ್ನಿ. ಭೀಮ, ಅರ್ಜುನ, ನಕುಲ, ಸಹದೇವರು ಆಕೆಯ ಮೈದುನರು. ಆಕೆಗೆ ಐದು ಮಂದಿ ಗಂಡರೆನ್ನುವದು ನಂಬಲಾಗದ ಕಟ್ಟು ಕಥೆ. ಹಿಂದೂಧರ್ಮದಲ್ಲಿ ಒಬ್ಬ ಹೆಂಗಸಿಗೆ ಒಬ್ಬನೇ ಗಂಡ. ಭೀಮ, ಅರ್ಜುನ, ನಕುಲ, ಸಹದೇವರಿಗೆ ಸುಭದ್ರಾ, ಪ್ರಮಿಳಾ, ಭಾರತಿ, ಕರುಣವತಿ ಯೆಂಬ ಧರ್ಮ ಪತ್ನಿಯರಿದ್ದರು.

ಧರ್ಮರಾಜನು ದಾಯಾದಿಗಳಾದ ಕೌರವರ ಕಪಟವನ್ನರಿಯದೆ ಪಗಡೆಯನ್ನಾಡಿ ತನ್ನ ರಾಜ್ಯವನ್ನೂ, ಪಣ್ಮಣಿಯಾದ ದ್ರೌಪದಿಯನ್ನೂ ಅವರಿಗೆ ಸೋತನು. ದುರ್ಜನನಾದ ದುರ್ಯೋಧನನು ಅಟ್ಟಹಾಸದಿಂದ "ಈ ತೊತ್ತುಗಳಿಗೇಕೆ ರಾಜಭೂಷಣಗಳು ತೆಗೆದು ಭಂಡಾರದಲ್ಲಿಡಿರಿ. ಅವರ ಆಯುಧ ಸಾಮಗ್ರಿಗಳನ್ನು ಕಿತ್ತು ಒಳಗಿಡಿರಿ" ಎಂದು ಆಜ್ಞಾಪಿಸಿದನು. ನೀಚ ಸೇವಕರು ಕೈ ಹಾಕುವ ಮೊದಲೇ ವಸ್ತ್ರ ಭೂಷಣಾದಿಗಳನ್ನೂ ಆಯುಧ ಗಳನ್ನೂ ತೆಗೆದು ಪಾಂಡವರು ಕೆಳಗಿಟ್ಟರು. ದುರ್ಯೋಧನನಿಗೆ ಅಷ್ಟಕ್ಕೆ ತೃಪ್ತಿಯುಂಟಾದಂತೆ ತೋರಲಿಲ್ಲ. "ಕರೆದು ತನ್ನಿರಿ ಆ ತೊತ್ತನ್ನು (ದ್ರೌಪದಿಯನ್ನು) ನಮ್ಮ ಅಂತಃಪುರದ ಪರಿಚಾರಿಕೆಯರಲ್ಲಿ ಒಬ್ಬಳಾಗಿರಲಿ" ಎಂದು ಆಜ್ಞಾಪಿಸಿದನು. ಆ ಕರ್ಣಕಠೋರ ವಾಕ್ಯಗಳನ್ನು ಕೇಳಿ ಎಲ್ಲರೂ ಸ್ತಂಭಿತರಾದರು. ಭೀಮಸೇನನು ಮೀಸೆಯನ್ನು ಹುರಿಗಟ್ಟಿ ಒಮ್ಮೆ ಧರ್ಮ ರಾಜನನ್ನು ನೋಡಿದನು. ಸುಮ್ಮನಿರೆಂದು ಕಣ್ಣುಸನ್ನೆಯಿಂದಲೇ ಅಣ್ಣನ ಆಜ್ಞೆಯಾಯಿತು. ಕ್ರೋಧಾಗ್ನಿಯಿಂದ ಭೀಮನು ತಳಮಳಗೊಳ್ಳುತ್ತ ದಶದಿಕ್ಕುಗಳನ್ನು ನೋಡುತ್ತಿದ್ದನು.

ದುರ್ಯೋಧನನ ತಮ್ಮನಾದ ದುಶ್ಶಾಸನು ಪರಮಸುಕುಮಾರಿಯಾದ ದ್ರೌಪದಿಯನ್ನು ದರದರನೆ ರಾಜಸಭೆಗೆ ಎಳತಂದನು. ಆ ಸಭೆಯಲ್ಲಿ

ಕುರುಪಿತಾಮಹನಾದ ಭೀಷ್ಮನೂ, ಗರುಡಿಯಾಚಾರ್ಯನಾದ ದ್ರೋಣನೂ, ಕೃಪಾಶ್ವತ್ಥಾಮರೂ, ವಿದುರ ಕರ್ಣಾದಿಗಳೂ, ನೂರುಜನ ಕೌರವರೂ, ಸಾಮಂತರಾಜರೂ, ರಾಜಸೇವರೂ, ಧೃತರಾಷ್ಟ್ರಾದಿಗಳೂ ಎಲ್ಲರೂ ತುಂಬಿದ್ದರು. ಆ ಅನ್ಯಾಯ ಬೇಡವೆಂದು ಯಾರೂ ಹೇಳಲಿಲ್ಲ. ಎಲ್ಲರ ನಾಲಿಗೆಗಳು ಸೇದಿ ಹೋಗಿದ್ದವು.

ಆ ಎಲ್ಲ ಪುರುಷರ ಮುಂದೆ ದ್ರೌಪದಿಯು ದುರವಸ್ಥೆಯಲ್ಲಿದ್ದಾಳೆ. ಉಟ್ಟ ಸೀರೆ ಅರ್ಧ ಜಾರಿ, ಕಟ್ಟಿದ ಸೀರಿ ಮುಡಿ ಬಿಚ್ಚಿ, ಮಾನಸಂರಕ್ಷಣೆಗಾಗಿ ಒದ್ದಾಡುತ್ತ "ಅಯ್ಯೋ! ನನ್ನನ್ನು ಬಿಡಿಸುವರಾರೂ ಇಲ್ಲವೇ? ಈ ಪಾಪಾತ್ಮನು ಹೀಗೆ ನನ್ನನ್ನು ಭಂಗಪಡಿಸುವನಲ್ಲಾ" ಎಂದು ಪಾಂಚಾಲಿ ಒರಲಿದಳು. ಅಯ್ಯೋ ಗಾಂಧಾರೀದೇವಿಯರೇ! ನಾನು ನಿಮಗೆ ಸೊಸೆಯಲ್ಲವೇ? ಈ ಸೆರಗನ್ನು ಬಿಡಿಸಿರಿ. ಈ ಹೆಣ್ಣು ಜನ್ಮದ ಮಾನವನ್ನು ಉಳಿಸಿರಿ" ಎಂದು ಕಣ್ಣೀರ ಸುರಿಸುತ್ತಾ ಮೊರೆಯಿಟ್ಟಳು ನಿರಪರಾಧಿನಿಯೂ ನಿಸ್ಸಹಾಯಳೂ ಆದ ತಮ್ಮ ಅತ್ತಿಗೆಯ ದುಃಸ್ಥಿತಿಯನ್ನು ನೋಡಿ ಭೀಮಸೇನನು ಮಹಾ ಕೋಪದಿಂದ ಉರಿದೆದ್ದು ಸಹದೇವಾ! ಬೆಂಕಿಯನ್ನು ತಾ, ದ್ಯೂತವಾಡಿದ ಧರ್ಮರಾಯನ ಕೈಯನ್ನು ಸುಡುವೆನು" ಎಂದನು. ಕೂಡಲೆ ಅರ್ಜುನನು ಆತನನ್ನು ನೋಡಿ "ಹೆಂಗಸಿಗಾಗಿ ಧರ್ಮವನ್ನು ಮೀರುವೆಯಾ? ಸುಮ್ಮನಿರು. ಧರ್ಮರಾಯನು ಅಗ್ರಜನಲ್ಲವೇ? ತಂದೆಗೆ ಸಮಾನನಲ್ಲವೇ, ಎಂದು ಸಮಾಧಾನ ಪಡಿಸಿ ಕುಳ್ಳಿರಿಸಿದನು.

ದ್ರೌಪದಿ ಆ ಸಭೆಯಲ್ಲಿದ್ದ ಭಾನುಮತಿಯನ್ನೂ ದುಶ್ಶಳೆಯನ್ನೂ ವಿವಿಧ ವಿಲಾಸಿನಿಯರನ್ನೂ ನೋಡಿ "ಈ ನರರಾಕ್ಷಸನ ಕೈಯಿಂದ ಬಿಡಿಸಿರಮ್ಮಾ! ನನ್ನ ಮಾನವನ್ನುಳಿಹಿರಮ್ಮಾ!" ಎಂದು ಪರಿಪರಿಯಾಗಿ ಬೇಡಿದಳು. ಯಾರೂ ಮಾತಾಡಲಿಲ್ಲ. "ನಿಮಗೆ ಹೆಣ್ಣು ಮಕ್ಕಳಿಲ್ಲವೇ? ನಿಮ್ಮ ಮಗಳೆಂದು ತಿಳಿದು ಸಲಹಿರಿ" ಎಂಮ ಕಂಡ ಕಂಡವರನ್ನೆಲ್ಲ ಕೂಗಿ ಬೇಡಿದಳು. ಯಾರೂ ಬೆರಳೆತ್ತಲಿಲ್ಲ. ಕಡೆಗೆ ಇಲ್ಲಿಯಾರೂ ರಕ್ಷಕರಿಲ್ಲ. ಅನಾಥ ರಕ್ಷಕನೊಬ್ಬನೇ, ಎಂದು ತಿಳಿದು, ಎಲೈ ಕೃಷ್ಣಾ! ಕೃಷ್ಣಾ! ಕಾಪಾಡು ಕಾಪಾಡು ಸ್ವಾಮಿ! ನನ್ನ ಮಾನವನ್ನು ಉಳುಹು. ತಂದೆ! ನೀನಲ್ಲದೆ

ನನಗೆ ಬೇರೆ ಗತಿಯಿಲ್ಲ. ದೇವಾ! ಎಂದು ಮೊರೆಯಿಟ್ಟಳು ಆಗ ಶ್ರೀಕೃಷ್ಣನ ಅನುಗ್ರಹದಿಂದ ದ್ರೌಪದಿಯ ಸೀರೆಯು ಬಿಚ್ಚಿಬಿಚ್ಚಿದ ಹಾಗೆ ಅದು ತುದಿಮೊದಲಿಲ್ಲದೆ ಬೆಳೆಯಿತು. ದಿನವೆಲ್ಲಾ ಎಳೆದು ಎಳೆದು ಕೈ ಸೋತನು. ಸಭೆಯಲ್ಲಿದ್ದವರೆಲ್ಲಾ ಆಶ್ಚರ್ಯಗೊಂಡರು. ದುರ್ಯೋಧನನು "ಆ ತೊತ್ತನ್ನು ಅಂತಃಪುರದೊಳಕ್ಕೆ ದೂಡು" ಎಂದು ಆಜ್ಞೆಮಾಡಿದನು. ಕೂಡಲೇ ರೋಷಪರವಶನಾದ ಭೀಮಸೇನನು ಸಿಂಹದಂತೆ ಘರ್ಜಿಸಿ ಜಿಗಿದು ನಿಂತನು. ದುಶ್ಶಾಸನನು ನಡುಗುತ್ತಾ ದ್ರೌಪದಿಯನ್ನು ಬಿಟ್ಟೋಡಿ ಅಣ್ಣನ ಬೆನ್ನ ಹಿಂದೆ ಅವಿತುಕೊಂಡನು "ಈ ನೀಚನ ಎದೆಯನ್ನು ಸೀಳಿ ಅವನ ರಕ್ತಪಾನ ಮಾಡದಿದ್ದರೆ ನಾನು ಭೀಮನಲ್ಲ" ಎಂದು ಕೂಗಿ ಹೇಳಿದನು. ದುಃಖದಿಂದಲೂ, ಕೋಪದಿಂದಲೂ ತುಂಬಿದ್ದ ಪಾಂಚಾಲಿ "ಈ ನೀಚನ ವಕ್ಷಸ್ಥಳದ ಬಿಸಿನೆತ್ತರದಲ್ಲದ್ದಿ, ಅವನ ದಂತದ ಬಾಚಣಿಗೆಯಿಂದ ಬಾಚಿ, ಕಟ್ಟುವೆನು ಈ ಮುಡಿಯನ್ನು. ಅದು ವರೆಗೆ ನಾ ಕಟ್ಟೆ" ಎಂದು ರೋಷದಿಂದ ನುಡಿದಳು.

"ದುರ್ಯೋಧನನು ಆದಿರಲಿ ಬಾ ತೊತ್ತೆ! ನನ್ನ ತೊಡೆಯೇರು! ಎಂದು ನಗುತ್ತಾ ಹೇಳಲು" "ತೊಡೆಮುರಿದು ಸಾಯಿ." ಎಂದು ಶಪಿಸಿದಳು. ಭೀಮಸೇನನು "ನಾನೇ ಮುರಿದು ಸಾಯಿಸುವೆನು" ಎಂದು ಶಪಥ ಮಾಡಿದನು. ಆಗ ಎಲ್ಲ ಕಡೆಗಳಲ್ಲೂ ದುಶ್ಶಕುನಗಳಾದವು ಸಭೆಯವರೆಲ್ಲಾ ಭಯಭ್ರಾಂತರಾದರು. ಕುರುವಂಶದ ನಿರ್ಮೂಲಕ್ಕೆ ಪ್ರಾರಂಭವಾಯಿತೆಂದುಕೊಂಡರು.

ಪಾಂಡವರು ನಂತರ ವನವಾಸಕ್ಕೆ ಹೊರಡುವಾಗ ಶ್ರೀಕೃಷ್ಣನು ಭೆಟ್ಟಿಯಾದನು. ದ್ರೌಪದಿಯು ಶ್ರೀಕೃಷ್ಣನ ಪಾದಗಳ ಮೇಲೆ ಬಿದ್ದು ದುಃಖದಿಂದ ಹೊರಳಾಡಿದಳು. ಶ್ರೀಕೃಷ್ಣನು ಆಕೆಯನ್ನೆತ್ತಿ ಸಮಾಧಾನಪಡಿಸಿದನು. ತಂಗಿ! ಹಿಂದೆ ಆದುದಕ್ಕೆ ವ್ಯಥೆಪಟ್ಟು ಫಲವೇನು? ಮುಡಿಯನ್ನು ಕಟ್ಟಿ. ಶಾಂತಳಾಗು. ಎಂದು ಹೇಳಿದನು. ಆಗ ಆಕೆ "ಕೃಷ್ಣಾ! ನಿನಗೆ ತಿಳಿಯದೆ? ನನ್ನ ಪ್ರತಿಜ್ಞೆ? ದುಶ್ಶಾಸನ ರಕ್ತದಲ್ಲಿ ನೆನೆಸಿ ಕಟ್ಟುವೆನು. ಅಲ್ಲಿಯವರೆಗೂ ಕಟ್ಟುವುದಿಲ್ಲ" ಎಂದು ಹೇಳಿದಳು. ಶ್ರೀಕೃಷ್ಣನು ಒಳ್ಳೆಯದು ತಂಗೀ! ನಿನ್ನ ಪ್ರತಿಜ್ಞೆ ನನ್ನದಾಗಿರಲಿ. ಅದು ಪೂರೈಸುವಂತೆ ನಾನು

ಮಾಡುವೆನು. ಭೀಮಾರ್ಜುನರಿಂದ ಕುರುಕುಲವನ್ನು ನಿರ್ಮೂಲ ಮಾಡಿಸುವೆನು. ಧರ್ಮವ್ರತವನ್ನು ಸಾಂಗವಾಗಿ ನೆರವೇರಿಸಿಕೊಂಡು ಬನ್ನಿರಿ ಎಂದು ಹೇಳಿಹೋದನು.

ದ್ರೌಪದಿಯು ಅರಣ್ಯವಾಸದಲ್ಲಿ ಕಷ್ಟಗಳನ್ನು ಸಹಿಸಲಾರದೆ ಕಣ್ಣೀರು ಹಾಕಿದಳು. ಎಲೈ ಧರ್ಮರಾಯನೇ! ನಮ್ಮ ಕಷ್ಟ ಸಂಕಟಗಳನ್ನು ನೋಡಿಯೂ, ಇವಕ್ಕೆ ಕಾರಣರಾದ ದುಷ್ಟ ಕೌರವರ ವಿಚಾರದಲ್ಲಿ ನೀನು ಕ್ಷಮಾವಂತನಾಗಿರುವಿಯಲ್ಲಾ! ಕಪಟಿಗಳೂ, ರಾಜ್ಯಲೋಭಿಗಳೂ ಆದ ಆ ನೀಚರನ್ನು ನೀನು ಕೋಪದಿಂದೇಕೆ ದಹಿಸಿ ಬಿಡುವುದಿಲ್ಲ? ಎಂದು ನಿಟ್ಟುಸಿರು ಬಿಟ್ಟಳು. "ಕ್ಷತ್ರಿಯನಾದವನಿಗೆ ಕೋಪವೆಂಬುದು ಇರಬೇಕು. ಕೋಪವಿಲ್ಲದವನನ್ನು ಎಲ್ಲರೂ ತಿರಸ್ಕರಿಸುವರು. ಅಂಥವರನ್ನು ಸೇವಕರೂ ಕೂಡ ಸರಿಯಾಗಿ ಓಲೈಸರು. ಈಗ ನೀನು ಕ್ಷಮೆಯನ್ನು ತೋರಿಸತಕ್ಕದ್ದಲ್ಲ. ಕೋಪವನ್ನು ತೋರಿಸಿ ಪರಾಕ್ರಮದಿಂದ ರಾಜ್ಯವನ್ನು ಪುನಃ ಪಡೆಯಬೇಕು." ಎಂದು ಹೇಳಿದಳು.

ಆಗ ಧರ್ಮರಾಯನು ಆಕೆಯ ಸಂಕಟವನ್ನು ನೋಡಿ ಮರುಕಗೊಂಡು "ಎಲೌ ದೇವಿ? ದುಃಖದಿಂದ ನೀನು ಹೀಗೆ ನುಡಿಯುತ್ತಿರುವೆ. ದುರ್ಬುದ್ಧಿಯುಳ್ಳವರಾದ ಕೌರವರು ಋಜುಮಾರ್ಗವನ್ನು ಮೀರಿ ನಡೆದರು. ನಾನು ಕೂಡ ಅವರಂತೆ ಸತ್ಯಮಾರ್ಗವನ್ನು ಬಿಡಬೇಕೆ? ಕ್ಷಮಾಗುಣವೂ ಸತ್ಯಮಾರ್ಗವೂ ಇಲ್ಲದ ಅವರು ಬಹುಕಾಲ ರಾಜ್ಯವನ್ನಾಳಲಾರರು. ಆತ್ಮಜ್ಞಾನಿಗಳು ಕ್ಷಮೆಯನ್ನು ಬಿಡಬಾರದು. ಎಂದು ಸಮಾಧಾನ ಪಡಿಸಿದನು. ಆದರೂ ದ್ರೌಪದಿಯು ದುಃಖದಿಂದ 'ಅಕಟಕಟಾ! ನಿನ್ನ ಕ್ಷಮೆಯೆ! ಪಿತ್ರಾರ್ಜಿತವಾದ ರಾಜ್ಯವನ್ನು ಸಂಪಾದಿಸಿಕೊಳ್ಳುವದರಲ್ಲಿ ನಿನಗೆ ಬುದ್ಧಿಯೇ ಪ್ರವೇಶಿಸನಲ್ಲಾ! ಹೀಗೆ ನಿನಗೆ ಬುದ್ಧಿಯನ್ನು ಕೊಟ್ಟ ಆ ಪರಮಾತ್ಮನಿಗೆ ನಮಸ್ಕಾರ. ನೀಚನಾದ ದುರ್ಯೋಧನನಿಗೆ ರಾಜ್ಯಭೋಗ ಸಂಪತ್ತುಗಳನ್ನೂ, ಸಾಧುವಾದ ನಿನಗೆ ಅರಣ್ಯವಾಸದ ಕಷ್ಟಸಂಕಟಗಳನ್ನೂ, ಕೊಟ್ಟ ಆ ಪರಮಾತ್ಮನ ವೈಷಮ್ಯ ನಿಂದಿಸತಕ್ಕದ್ದೇ ಸರಿ" ಎಂದಳು. ಆಗ ಧರ್ಮರಾಯನು ಎಲೌ ದೇವಿ! ಪರಮಾತ್ಮನನ್ನು ಏಕೆ ನಿಂದಿಸುವೆ? ಅವರವರ ಕರ್ಮಫಲಗಳನ್ನು ಉಪಭೋಗಿಸುವಂತೆ ಮಾಡುವ ದೇವರನ್ನು ನಿಂದಿಸ

ಬೇಡ" ಎಂದು ಸಮಾಧಾನ ಪಡಿಸಿದನು. ದ್ರೌಪದಿ "ನಾನು ಧರ್ಮವನ್ನೂ ಬಲ್ಲೆ. ದೇವರನ್ನೂ ಬಲ್ಲೆ. ಆ ಪಾಪಿ ದುರ್ಯೋಧನನು ನಮಗೆ ಕೊಟ್ಟಿರುವ ಈ ಕಷ್ಟಗಳನ್ನು ಸಹಿಸದೆ, ಸಂಕಟದಿಂದ ಹೇಳಿದೆನೆ ಹೊರತು ಬೇರೆ ಅಲ್ಲ ಎಂದಳು. ದ್ರೌಪದಿಗೆ ಒದಗಿದ ಸಂಕಷ್ಟಗಳು ಅಷ್ಟಿಷ್ಟಲ್ಲ. ಕೌರವ ವಂಶದ ಮೈದುನ ಸೈಂಧವ ಕಾಡಿದ. ಭಾವ ದುರ್ಯೋಧನ ಕಾಡಿದ. ವಿರಾಟನ ಭಾವ ಮೈದುನನಾದ ಕೀಚಕನು ಕಣ್ಣಿಟ್ಟು ಕಾಡಿದ. ಇವರೆಲ್ಲರನ್ನೂ ಭೀಮನು ಮಣ್ಣು ಮುಕ್ಕಿಸಿದನು.

ಪಾಂಡವರು ಹನ್ನೆರಡು ವರ್ಷ ವನವಾಸವನ್ನೂ ಒಂದು ವರ್ಷ ಅಜ್ಞಾತ ವಾಸವನ್ನೂ ಮುಗಿಸಿಕೊಂಡು ಬಂದರು. ಮುಂದೇನು ಮಾಡಬೇಕೆಂದು ಶ್ರೀ ಕೃಷ್ಣನೊಡನೆ ಯೋಚಿಸಿದರು. ಯುದ್ಧವನ್ನು ತಪ್ಪಿಸಿ ರಾಜಿಯಾಬೇಕೆಂದು ಸಂಧಿ ಪ್ರಸ್ತಾಪ ಮಾಡುತ್ತಿದ್ದಾಗ ದ್ರೌಪದಿ ಅಲ್ಲಿಗೆ ಬಂದಳು. ಕೋಪ ದುಃಖಗಳಿಂದ ಕೂಡಿದವಳಾಗಿ "ಕೃಷ್ಣಾ! ಆ ತುಂಬಿದ ಸಭೆಯಲ್ಲಿ ದುಶ್ಶಾಸನು ನನ್ನನ್ನು ಎಳದು ತರುತ್ತಿದ್ದರೆ ಸುಮ್ಮನೆ ನೋಡುತಿದ್ದರಲ್ಲದೆ? ಬಿಡಿಸಲು ಬಂದರೆ ಈ ಪತಿ ಮೈದುನರು? ನನ್ನನ್ನು ಮಾರಿಯಾದರೂ ಧರ್ಮವನ್ನು ಕಾಪಾಡಿಕೊಳ್ಳುವರಲ್ಲದೆ ರೋಷ ಪೌರುಷಗಳಿಲ್ಲ. ಈ ಮಹಾರಾಯರಿಗೆ. ನೊಂದವಳು ನಾನು. ನೋವು ತೆಗೆಯುವವನು ನೀನು" ಎಂದಳು.

ಅನಂತರ ಭೀಮನನ್ನು ನೋಡಿ, "ಆ ಸಭೆಯಲ್ಲಿ ಪ್ರತಿಜ್ಞೆಗಳನ್ನು ಮಾಡಿದವನು, ದುಶ್ಶಾಸನ ಎದೆಯನ್ನು ಸೀಳುವೆನೆಂದಾಡಿದ ಧೀರ! ಆ ದುಷ್ಟ ದುರ್ಯೋಧನನ ತೊಡೆಯನ್ನು ಮುರಿಯುವೆನೆಂದು ಬಾಷೆ ಕೊಟ್ಟ ಶೂರ! ಅರಣ್ಯವಾಸದಲ್ಲಿ ನಾನು ಪಟ್ಟ ಕಷ್ಟಗಳನ್ನು ನೀನು ನೋಡಲಿಲ್ಲವೆ? ಅಜ್ಞಾತವಾಸದಲ್ಲಿ ನಾನು ಪಟ್ಟ ಭಂಗಗಳನ್ನು ನೀನು ನೋಡಲಿಲ್ಲವೆ? ಸಂಧಿಯ ಮಾತನ್ನಾಡುವಿಯಾ" ಎಂದು ಮೂದಲಿಸಿದಳು. ಭೀಮನು ದ್ರೌಪದಿಯ ಬಿಚ್ಚಿದ ಮುಡಿಯನ್ನೂ ಹರಿಯುವ ಕಣ್ಣೀರನ್ನೂ ನೋಡಿ, ಪ್ರತಿಜ್ಞಾಸ್ಮರಣದಿಂದ ಉದ್ರೇಕಿತನಾಗಿ "ಕೂಡದು ಸಂಧಿ" ಆ ದುರ್ಯೋಧನನನ್ನು ನಾನು ಸಂಹಾರ ಮಾಡಿದಲ್ಲದೆ ಬಿಡೆನು. ಎಂದು ದ್ರೌಪದಿಯನ್ನು ಸಮಾಧಾನ ಪಡಿಸಿದನು.

ಮುಂದೆ ಪಾಂಡವರಿಗೂ ಕೌರವರಿಗೂ ಯುದ್ಧ ಸುರುವಾಗಿ ದುಷ್ಟರಾದ ಕೌರವರೆಲ್ಲರೂ ಮಡಿದರು. ಪಾಂಡವರು ಗೆದ್ದರು. ಶ್ರೀ ಕೃಷ್ಣನ ಸಹಾಯದಿಂದ ಪಾಂಡುನೃಪತಿಯಾದ ಧರ್ಮರಾಜನು, ದ್ರೌಪದಿಯೊಂದಿಗೂ ಅನುಜರೊಂದಿಗೂ ಧರ್ಮದಿಂದ ರಾಜ್ಯವಾಳಿದನು.

---

# ತಾರಾಮತಿ



ಹರಿಶ್ಚಂದ್ರನು ಬಹಳ ಸತ್ಯವಂತನಾಗಿ ರಾಜ್ಯವನ್ನಾಳುತ್ತಿದ್ದನು. ಅವನ ಹೆಂಡತಿಯ ಹೆಸರು ತಾರಾಮತಿ ಅಥವಾ ಚಂದ್ರಮತಿ. ಮಗನ ಹೆಸರು ಲೋಹಿತಾಶ್ವ. ಹರಿಶ್ಚಂದ್ರನು ತನ್ನ ಸತ್ಯಪಾಲನೆಗಾಗಿ ಸಮಸ್ತ ಐಶ್ವರ್ಯವನ್ನು ವಿಶ್ವಾಮಿತ್ರನಿಗೆ ಧಾರೆಯೆರೆದನು. ರಾಜ್ಯವನ್ನು ಬಿಟ್ಟು ಕಾಶಿಗೆ ಕಾಲು ನಡಿಗೆಯಿಂದ ಚಂದ್ರಮತಿಯನ್ನೂ ಲೋಹಿತಾಶ್ವನನ್ನೂ ಕರಕೊಂಡು ಹೊರಟನು.

ವಿಶ್ವಾಮಿತ್ರನಿಗೆ ಕೊಡಬೇಕಾದ ಪೂರ್ತಿ ಹಣವು ಮುಟ್ಟದ್ದಕ್ಕೆ? ಅಲ್ಲಿ ಕಾಲಕೌಶಿಕನೆಂಬ ಬ್ರಾಹ್ಮಣನಿಗೆ ತನ್ನ ಹೆಂಡತಿಯನ್ನು ಮಾರಿದನು. ಚಂದ್ರಮತಿಯು ಪತಿಗೆ ಬಂದ ಕಷ್ಟವನ್ನು ನೆನೆದು ಕಣ್ಣೀರು ಸುರಿಸಿದಳು. ಬೀದಿಯಲ್ಲಿಯೇ ಪತಿಯ ಪಾದಗಳನ್ನು ಹಿಡಿದು "ದೇವಾ! ವಿಶ್ವನಾಥಾ! ನನ್ನ ಪತಿಯನ್ನು ಚಿರಕಾಲ ಕಾಪಾಡು. ಜನ್ಮಜನ್ಮಾಂತರಕ್ಕು ಇವನೇ ನನ್ನ ಪತಿಯಾಗಿರಲಿ" ಎಂದು ಪ್ರಾರ್ಥಿಸಿದಳು. ಚಂದ್ರಮತಿಯು ಪತಿಯನ್ನಗಲಿ ಆ ಬ್ರಾಹ್ಮಣನ ಮನೆಗೆ ಹೊರಟಳು. ತಂದೆಯನ್ನಗಲಿ ಲೋಹಿತಾಶ್ವನು ತಾಯಿಯ ಹಿಂದೆ ಅಳುತ್ತಾ ಹೋದನು. ಹರಿಶ್ಚಂದ್ರನು ಮೂಕನಂತೆ ನಿಂತು ಬಿಟ್ಟನು.

ಅನಂತರ ಪೇಟೆಯಲ್ಲಿ ತಿರುಗುತ್ತಾ ತನ್ನನ್ನು ಯಾರು ಬೇಕಾದರೂ ಕೊಳ್ಳಬಹುದೆಂದು ಸಾರುತ್ತಾ ಹೋದನು. ಕೊನೆಗೆ ಕಾಶೀಪಟ್ಟಣದ ಸ್ಮಶಾನದ ಕಾವಲುಗಾರನಾದ ವೀರಬಾಹು ವೆಂಬ ಚಂಡಾಲನು ಅವನನ್ನು

ಕೊಂಡು ಕೊಂಡನು. ವೀರಬಾಹು ಹರಿಶ್ಚಂದ್ರನನ್ನು ಸ್ಮಶಾನವನ್ನು ಕಾದು ಕೊಂಡಿದ್ದು, ಅಲ್ಲಿಗೆ ಬಂದ ಹೆಣಗಳ ಮೇಲಿನ ಸುಂಕವನ್ನು ತೆಗೆದುಕೊಳ್ಳ ಬೇಕೆಂದು ಹೇಳಿ ನಿಯಮಿಸಿದನು. ಸ್ಮಶಾನ ಸಂಪರ್ಕದಲ್ಲಿರುವಾಗ್ಗೆ ತನ್ನ ನಿತ್ಯಕರ್ಮಗಳನ್ನು ಮಾಡದಿರುವದಕ್ಕಾಗಿ, ಹರಿಶ್ಚಂದ್ರನು ದೇವರ ಕ್ಷಮೆ ಯನ್ನು ಮನಸ್ಸಿನಲ್ಲೇ ಬೇಡಿದನು.

ಇತ್ತ ಕಾಲಕೌಶಿಕನ ಮನೆಯಲ್ಲಿ ಚಂದ್ರಮತಿಗೆ ಸ್ವಲ್ಪವೂ ಬಿಡುವಿಲ್ಲದೆ ಹಗಲೂ ರಾತ್ರಿ ಏಕಸಮನಾಗಿ ಕೆಲಸವಿರುತಿತ್ತು. ಕಾಲಕೌಶಿಕನು ಲೋಹಿ ತಾಶ್ವನಿಗೆ ಬಿಟ್ಟಿ ಅನ್ನವನ್ನು ಹಾಕುವದಕ್ಕಾಗುವುದಿಲ್ಲವೆಂದು ಹೇಳಿ, ಅವನನ್ನು ನಿತ್ಯವೂ ಕಟ್ಟಿಗೆಯನ್ನು ತರುವುದಕ್ಕಾಗಿ ಕಾಡಿಗೆ ಕಳುಹಿಸುತಿದ್ದನು. ತಾಯಿ ಮಕ್ಕಳು ಮಲಗಿದಾಗ ಮಾತ್ರ ಒಬ್ಬರ ಮುಖವನ್ನೊಬ್ಬರು ನೋಡುತ್ತಿದ್ದರು. ಒಂದು ದಿನಸ ಲೋಹಿತಾಶ್ವನು ಕಾಡಿಗೆ ಕಟ್ಟಿಗೆ ತರಲು ಹೋದನು. ಅಲ್ಲಿ ಒಂದು ನಾಗರಹಾವು ಅವನನ್ನು ಕಚ್ಚಿತು. ಲೋಹಿತಾಶ್ವನು ಚಿಟ್ಟನೆ ಚೀರಿದನು. ಅಮ್ಮಾ! ಎಂದು ತಾಯಿಯನ್ನು ಒದರಿ ವಿಷವೇರಿ ಸ್ವಲ್ಪ ಹೊತ್ತಿನಲ್ಲಿ ಅಲ್ಲಿಯೇ ಮಡಿದನು.

ಸಾಯಂಕಾಲವಾಗಲು ಎಂದಿನಂತೆ ತನ್ನ ಮಗನು ಮನೆಗೆ ಬಾರದಿರುವ ದನ್ನು ನೋಡಿ ಚಂದ್ರಮತಿ ಚಿಂತೆಗೊಗಾದಳು. ಜೊತೆಯಲ್ಲಿ ಹೋಗಿದ್ದ ಹುಡುಗರನ್ನು ವಿಚಾರಿಸಲು ಅವರು ಕಾಡಿನಲ್ಲಿ ನಡೆದ ವಿಷಯವನ್ನೆಲ್ಲಾ ತಿಳಿಸಿದರು. ಅದನ್ನು ಕೇಳಿ ಚಂದ್ರಮತಿಯು ನೆಲಕ್ಕೆ ದೊಪ್ಪನೆಬಿದ್ದಳು. ಪ್ರಜ್ಞೆಯೇ ತಪ್ಪಿಹೋಯಿತು. ಸ್ವಲ್ಪ ಹೊತ್ತಿನ ಮೇಲೆ ಚೇತರಿಸಿಕೊಂಡಳು. ತನ್ನ ದುಃಖವನ್ನು ಯಾರ ಮುಂದೂ ಹೇಳಿಕೊಳ್ಳುವದಕ್ಕೆ ಆಗಲಿಲ್ಲ. ಮನೆಯ ಕೆಲಸವನ್ನೆಲ್ಲಾ ಮುಗಿಸಿ ಯಜಮಾನನ ಅಪ್ಪಣೆಯನ್ನು ಪಡೆದು, ಕತ್ತಲೆಯಲ್ಲಿ ಕಾಡಿಗೆ ತನ್ನ ಸತ್ತ ಕಂದನನ್ನು ಕಾಣಲು ಹೊರಟಳು. ಸೂರ್ಯ ವಂಶದಲ್ಲಿ ಹುಟ್ಟಿ, ಸಮಸ್ತ ವೈಭವಗಳನ್ನು ಅನುಭವಿಸುತ್ತಿದ್ದ, ರಾಜ ಕುಮಾರನು ದಿಕ್ಕಿಲ್ಲದೆ ಕಾಡುಪಾಲಾದನಲ್ಲಾ! ಎಂದು ಬಗೆ ಬಗೆಯಾಗಿ ನೆನೆದು ಗೋಳಾಡಿದಳು. ಮಗನ ಶವವನ್ನು ತೊಡೆಯಮೇಲಿಟ್ಟುಕೊಂಡು ರೋಧಿಸಿದಳು. ಅತ್ತತ್ತು ಸಾಕಾಗಿ ಕೊನೆಗೆ ಶವಸಂಸ್ಕಾರವನ್ನು ಮಾಡು

ವದಕ್ಕೋಸ್ಕರ ಸ್ಮಶಾನಕ್ಕೆ ಹೆಣವನ್ನು ತೆಗೆದುಕೊಂಡು ಬಂದಳು. ಅದನ್ನು ಒಂದು ಕಡೆ ಇಟ್ಟು ಕಟ್ಟಿಗೆಗಳನ್ನು ಕೂಡಿ ಹಾಕುತ್ತಿದ್ದಳು.

ಆಗ ಸ್ಮಶಾನವನ್ನು ಕಾಯುತ್ತಿದ್ದ ಹರಿಶ್ಚಂದ್ರನು ಚಂದ್ರಮತಿಯನ್ನು ಕುರಿತು ಕತ್ತಲೆಯಲ್ಲಿ ಯಾರೆಂಬುದನ್ನು ಅರಿಯದೆ, "ಎಲೌ! ಸ್ತ್ರೀಯೆ! ಸ್ಮಶಾನ ಶುಲ್ಕವನ್ನು ಕೊಟ್ಟಲ್ಲದೆ ಶವಸಂಸ್ಕಾರಕ್ಕೆ ಅಪ್ಪಣೆಯಿಲ್ಲ" ಎಂದನು. ಚಂದ್ರಮತಿಯು ಸಹಾ ಯಾರೆಂಬುದನ್ನು ಅರಿಯದೆ "ಅಯ್ಯಾ! ನನ್ನ ಹತ್ತಿರ ಒಂದು ಕಾಸೂ ಇಲ್ಲ. ನಾನು ಪರರ ಮನೆಯಲ್ಲಿ ದಾಸಿಯಾಗಿದ್ದೇನೆ. ನನಗೇನು ಗತಿಯಿಲ್ಲ. ನಾನೇನೂ ಕೊಡಲಾರೆ ಎಂದಳು. ಅವಳ ಧ್ವನಿಯನ್ನು ಕೇಳುತ್ತಲೆ ಹರಿಶ್ಚಂದ್ರನು ಕತ್ತಲೆಯಾಗಿದ್ದರೂ ಅವಳು ಚಂದ್ರಮತಿಯೆಂದು ತಿಳಿದನು. ಮನಸ್ಸಿಗೆ ಎಷ್ಟು ದುಃಖವಾದರೂ ತಡೆದುಕೊಂಡು ತನ್ನ ಕಾರ್ಯವನ್ನು ಸರಿಯಾಗಿ ಮಾಡಬೇಕೆಂದು ನಿಶ್ಚಯಿಸಿ "ಅದೆಲ್ಲಾ ನಾನರಿಯೆ ಸುಂಕವನ್ನು ಕೊಟ್ಟೇ ತೀರಬೇಕು. ಈ ಶವ ಯಾರದು?" ಎಂದು ಕೇಳಿದನು. "ಅಯ್ಯಾ ಇದು ನನ್ನ ಮಗನದು ಲೋಹಿತಾಶ್ವನೆಂದು ಇವನ ಹೆಸರು. ಕಾಡಿನಲ್ಲಿ ಹಾವು ಕಚ್ಚಿ ಸತ್ತುಹೋದನು. ಎಂದು ಚಂದ್ರಮತಿ ಉತ್ತರಕೊಟ್ಟಳು.

ಅದನ್ನು ಕೇಳಿ ಹರಿಶ್ಚಂದ್ರನಿಗೆ ಸಿಡಿಲು ಬಡಿದಂತಾಯಿತು. ತನ್ನ ಮಗ ಸತ್ತನೆಂದು ತಿಳಿಯಿತು. ಆದರೂ ತಾನು ಸ್ವತಂತ್ರನಲ್ಲವೆಂದು ಜ್ಞಾಪಿಸಿಕೊಂಡು ಸ್ವಾಮಿಕಾರ್ಯವನ್ನು ಸತ್ಯವಾಗಿ ನಡಿಸಬೇಕೆಂದು "ಯಾರಾದರೂ ಆಗಲಿ. ಹಣವನ್ನು ಕೊಟ್ಟೇ ಮುಂದಿನ ಕಾರ್ಯವಾಗಬೇಕು, ಎಂದು ಹೇಳಿದನು. "ಅಯ್ಯಾ! ನೀನೇನು ಹೇಳಿದರೂ ನನ್ನಲ್ಲಿ ಏನೂ ಇಲ್ಲ. ನನಗೇನು ತೋರುವುದಿಲ್ಲ.'' ಎಂದಳು. ಅದಕ್ಕೆ ಹರಿಶ್ಚಂದ್ರನು "ನಿನ್ನ ಕೊರಳಿನಲ್ಲಿರುವ ಮಾಂಗಲ್ಯವನ್ನು ಕೊಡು" ಎಂದು ಹೇಳಿದೊಡನೆ ಚಕಿತಳಾಗಿ "ನೀವು ಯಾರು? ನಿಜವನ್ನು ಹೇಳಿರಿ." ನನ್ನ ಮಾಂಗಲ್ಯ ನನ್ನ ಪತಿಯನ್ನು ಳಿದು ಯಾರ ಕಣ್ಣಿಗೂ ಕಾಣಿಸದು. ನೀವು ಯಾರು? ನಿಜವನ್ನು ಹೇಳಿರಿ." ಎಂದಳು. ಆಗ ಹರಿಶ್ಚಂದ್ರನು ತಾನು ಯಾರು ಎಂಬುದನ್ನೂ ಅವಳನ್ನು ಮಾರಿದ ಮೇಲೆ ನಡೆದ ಎಲ್ಲ ವೃತ್ತಾಂತವನ್ನೂ ಹೇಳಿದನು.

ಇದು ಹೀಗಿರುವಾಗ್ಗೆ ವಿಶ್ವಾಮಿತ್ರನ ತಂತ್ರದಿಂದ ಆ ರಾತ್ರಿ ಒಬ್ಬ ಹೆಂಗಸು ಕಾಶಿರಾಜನ ಮಗನನ್ನು ಅಪಹರಿಸಿಕೊಂಡು ಹೋಗಿದ್ದಳು. ಅವಳನ್ನು ರಾಜಭಟರು ಹುಡುಕುತ್ತ ಸ್ಮಶಾನಕ್ಕೆ ಬಂದರು. ಕತ್ತಲೆಯಲ್ಲಿ ನಿಂತಿದ್ದ ಚಂದ್ರಮತಿಯೇ ಅವಳು, ಲೋಹಿತಾಶ್ವನೇ ರಾಜಪುತ್ರನಿರಬಹುದೆಂದೂ ತಿಳಿದು, ನ್ಯಾಯಾಧಿಪತಿಯ ಬಳಿಗೆ ಅವಳನ್ನು ಎಳೆದುಕೊಂಡು ಹೋದರು. ನ್ಯಾಯಾಧಿಪತಿಯು ಸ್ವಲ್ಪವೂ ವಿಚಾರಮಾಡದೆ ಅವಳ ಕತ್ತು ಕತ್ತರಿಸಿ ಬಿಡಿರೆಂದು ಆಜ್ಞೆಮಾಡಿದನು. ಚಂದ್ರಮತಿಯನ್ನು ವೀರಬಾಹುವಿನ ಹತ್ತಿರ ಕರೆದುಕೊಂಡು ಹೋದರು. ಅವನು ಸ್ಮಶಾನದ ಕಾವಲುಗಾರನಾದ ಹರಿಶ್ಚಂದ್ರನ ಕಡೆಗೆ ಕಳುಹಿಸಿದನು. ಚಂದ್ರಮತಿಯನ್ನು ಪುನಃ ಸ್ಮಶಾನಕ್ಕೆ ಕರೆದುಕೊಂಡು ಬಂದು ಹರಿಶ್ಚಂದ್ರನಿಗೆ ವೀರಬಾಹುವಿನ ಆಜ್ಞೆಯನ್ನು ತಿಳಿಸಿದರು. ಇದರಿಂದ ಹರಿಶ್ಚಂದ್ರನಿಗೆ ದಿಕ್ಕೇ ತೋರಲಿಲ್ಲ. ಸುಮ್ಮನೆ ಸ್ತಂಭೀಭೂತನಾಗಿ ನಿಂತು ಬಿಟ್ಟನು. ರಾಜಭಟರು ಹರಿಶ್ಚಂದ್ರನನ್ನು ಎಚ್ಚರಗೊಳಿಸಿ, ತನ್ನ ಕಾರ್ಯವನ್ನು ನಡೆಸಿ ರಾಜಾಜ್ಞೆಯನ್ನು ಮುಟ್ಟಿಸು ಎಂದು ಹೇಳಿದರು.

ಹರಿಶ್ಚಂದ್ರನಿಗೂ ಮತ್ತು ಚಂದ್ರಮತಿಗೂ ದುಃಖಾತಿರೇಕದಿಂದ ಶರೀರವೂ ಮತ್ತು ಮನಸ್ಸೂ ಜಡವಾಗಿ ಹೋಯಿತು. ರಾಜಭಟರು ಹರಿಶ್ಚಂದ್ರನನ್ನು ತ್ವರೆ ಮಾಡುಯೆಂದು ಹೇಳಿದರು. ಹರಿಶ್ಚಂದ್ರನು ದೇವರನ್ನು ಸ್ಮರಿಸಿ ಖಡ್ಗವನ್ನು ಕೈಯಲ್ಲಿ ತೆಗೆದುಕೊಂಡನು. ಚಂದ್ರಮತಿ ತನಗೆ ಕೊನೆಗಾಲ ಸಮೀಪಿಸಿತೆಂದು ತಿಳಿದು, ಪತಿಯ ಕೈಯ್ಯಲ್ಲಿ ಮರಣ ದೊರೆತದಕ್ಕೆ ಸಂತೋಷಪಟ್ಟಳು. ಗಂಡನಿಗೆ ನಮಸ್ಕಾರ ಮಾಡಿ ತಲೆಬಾಗಿ ಸಿದ್ಧವಾದಳು.

ಹರಿಶ್ಚಂದ್ರನು ಏಕಮನಸ್ಸಿನಿಂದ ದೇವರನ್ನು ಧ್ಯಾನಿಸುತ್ತ ಖಡ್ಗವನ್ನು ಮೇಲಕ್ಕೆ ಎತ್ತಿದನು. ಇನ್ನೇನು ಹೆಂಡತಿಯ ಶಿರಚ್ಛೇದನವನ್ನು ಮಾಡಬೇಕು, ಆ ಸಮಯಕ್ಕೆ ವಿಶ್ವಾಮಿತ್ರನು ಬಂದು ಕೈ ಹಿಡಿದನು. "ಹರಿಶ್ಚಂದ್ರಾ! ನಿನ್ನ ಸತ್ಯಕ್ಕೆ ಮೆಚ್ಚಿದೆನು" ಎಂದನು. ದೇವತೆಗಳು ಕೊಂಡಾಡಿದರು. ಪುಷ್ಪವೃಷ್ಟಿಗರೆಯಿತು. ಇನ್ನೇನು ಸತ್ಯವಂತರ ನಡತೆಯೇ ಹೀಗೆ.

# ಅ ನು ಸೂ ಯ



ಈ ಮಹಾ ಪತಿವ್ರತೆಯು ಅತ್ರಿಮಹರ್ಷಿಯ ಧರ್ಮಪತ್ನಿಯು. ಈಕೆಯು ಪತಿಭಕ್ತಿಯಲ್ಲಿ ಬಹು ಹೆಸರಾಗಿದ್ದಳು. ಈಕೆಯ ಕೀರ್ತಿಯು ದೇವಲೋಕದ ವರೆಗೆ ಮುಟ್ಟಿತ್ತು.

ಒಂದು ದಿನ ನಾರದ ಮಹರ್ಷಿಗಳು ದೇವಲೋಕದ ವರೆಗೆ ಹೋಗಿ, ಬ್ರಹ್ಮ ವಿಷ್ಣು ಮಹೇಶ್ವರರ ಧರ್ಮಪತ್ನಿಯರಾದ, ಶಾರದ ಲಕ್ಷ್ಮಿ, ಪಾರ್ವತಿ ಯರೆದುರಿಗೆ ಅನುಸೂಯೆಯ ಪತಿಭಕ್ತಿಯನ್ನು ಕೊಂಡಾಡಿದರು. ಆಗ ಅವರು ನಾವೇನು ಕಡಿಮೆ ಏನು? ಎಂದು ಸಿಟ್ಟಿಗೆದ್ದರು. ಆಗ ನಾರದರು ಅನಸೂಯೆಯ ಕೈಯಿಂದ ಕಡಲೆಗಳನ್ನು ಉರಿಯಿಲ್ಲದೆ ಅರಳು ಮಾಡಿಸಿ ಕೊಂಡು ಒಯ್ದರು. ತ್ರಿಮೂರ್ತಿಗಳ ಧರ್ಮಪತ್ನಿಯರಿಗೆ ಅವನ್ನು ತೋರಿಸಿ ನೀವು ಇದರಂತೆ ಮಾಡಿಕೊಡಿರೆಂದು ಕಡಲೆಗಳನ್ನು ಕೊಟ್ಟರು. ಆಗ ಆ ದೇವಿ ಯರು ಮಾಡಲಾರದೆ ಸೋತರು ತಮ್ಮ ಹೆಮ್ಮೆಗೆ ಕುಂದು ಬರುವದೆಂದೆಣಿಸಿ, ತಮ್ಮ ಗಂಡಂದಿರನ್ನು ಅನುಸೂಯೆಯ ಪಾತಿವ್ರತ್ಯವನ್ನು ಕೆಡಿಸಿ ಬರ್ರೆಂದು ಹೇಳಿ ಕಳುಹಿಸಿದರು.

ಆಗ ತ್ರಿಮೂರ್ತಿಗಳು ದೇವಿಯರ ಮಾತು ಕೇಳಿ, ಸಾಧುವೇಷವನ್ನು ಧರಿಸಿ ಅನಸೂಯೆಯಿದ್ದ ಆಶ್ರಮಕ್ಕೆ ಬಂದು, ಭಿಕ್ಷಾನ್‌ದೇಹಿ ಎಂದರು. ಆಗ ಅನಸೂಯೆಯು ಭಿಕ್ಷೆಯ ನೀಡಲು, ನಮಗೆ ಊಟಕ್ಕೆ ಬಡಿಸಬೇಕೆಂದು ಕೇಳಿದರು. ಆಗ ಅನಸೂಯೆಯು ಆಗಲೆಂದು ಒಪ್ಪಿ ಅವರನ್ನು ಕುಳ್ಳಿರಲು ಹೇಳಿ ಪಾಕಾದಿಗಳನ್ನು ಸಿದ್ಧಮಾಡಿದಳು. ಅವರ ಸ್ನಾನ ಪೂಜೆಯಗೈಸಿ ಉಣ ಬಡಿಸಲನುವಾದಳು. ಆಗ ಅವರು ನೀನು ದಿಗಂಬರದಿಂದ ಊಟಕ್ಕೆ ನೀಡಿದರೆ ನಾವು ಊಟಮಾಡುವೆವು. ಇಲ್ಲವಾದರೆ ನಾವು ಹಾಗೆ ಹೋಗುವೆವು, ಎನ್ನಲು ಅತಿಥಿಸೇವೆಯಲ್ಲಿ ಅಗ್ರಗಣ್ಯಳಾದ ಅನಸೂಯೆಯು ಸ್ವಲ್ಪ ಹೊತ್ತು ಯೋಚಿಸಿ,

ಒಳ್ಳೆಯದು ಕುಳಿತುಕೊಳ್ಳಿರಿ. ನಿಮ್ಮ ಮನದಿಚ್ಛೆಯಂತೆ ಉಣಬಡಿಸುವೆ ನೆಂದು ದೇವರ ಮನೆಯೊಳಗೆ ಹೋಗಿ, ಗಿಂಡಿಯಲ್ಲಿದ್ದ ಪತಿ ಪಾದೋದಕ ವನ್ನು ತಂದು, ಆ ತ್ರಿಮೂರ್ತಿಗಳ ಮೇಲೆ ತಳಿಯಲು ಆ ತ್ರಿಮೂರ್ತಿಗಳು ಶಿಶುಗಳಾದರು.

ಆಗ ಅನಸೂಯೆಯು ಆ ಮೂರು ಶಿಶುಗಳನ್ನು ತೊಟ್ಟಿಲಲ್ಲಿ ಹಾಕಿ ತೂಗುತ್ತಿರುವಾಗ್ಗೆ, ಹೊರಗೆ ಹೋಗಿದ್ದ ಅತ್ರಿಋಷಿಗಳು ಬಂದು, ಇದೇನು? ಚಮತ್ಕಾರ್ಯವೆಂದು ಕೇಳಿದರು. ನಡೆದ ಸಂಗತಿಯನ್ನೆಲ್ಲಾ ಅನಸೂಯೆಯು ಹೇಳಿದಳು. ಅತ್ರಿಋಷಿಗಳು ಅದನ್ನು ಕೇಳಿ ಇರಲಿ. ಈ ತ್ರಿಮೂರ್ತಿಗಳಿಗೆ ಯೋಗ್ಯ ಶಿಕ್ಷೆ ಮಾಡಿರುವೆಯೆಂದು ಹೆಂಡತಿಯನ್ನು ಕೊಂಡಾಡಿದರು.

ಇತ್ತ ದೇವಿಯರು ತಮ್ಮ ತಮ್ಮ ಪತಿ ದೇವರು ಬಾರದೆ ಬಹಳ ದಿವಸ ಗಳಾದ್ದರಿಂದ, ಚಿಂತೆಗೊಳಗಾದರು. ಅಷ್ಟರಲ್ಲಿ ನಾರದ ಮಹರ್ಷಿಗಳು ಬರಲು, ಅವರ ಬಾಯಿಂದ ತಮ್ಮ ಪತಿಗಳಿಗಾದ ಪ್ರಾಯಶ್ಚಿತ್ತವನ್ನು ಕೇಳಿ ಕಣ್ಣೀರಿಡುತ್ತಾ, ಅನಸೂಯಾ ದೇವಿಯ ಆಶ್ರಮಕ್ಕೆ ಓಡಿ ಬಂದರು. ಆ ಮಹಾತಾಯಿಯ ಪಾದದಮೇಲೆ ಬಿದ್ದು ಪತಿ ಭಿಕ್ಷೆಯನ್ನು ಬೇಡಿದರು. ಆಗ ಅನಸೂಯೆಯು ಆ ಮೂರೂ ಶಿಶುಗಳನ್ನು ತಂದು ಮುಂದಿಟ್ಟಳು. ನಿಮ್ಮ ನಿಮ್ಮ ಪತಿಯನ್ನು ಕರೆದುಕೊಂಡು ಹೋಗಿರೆಂದು ಹೇಳಿದಳು. ಬ್ರಹ್ಮ ನಾರು? ವಿಷ್ಣುವಾರು? ಮಹೇಶ್ವರನಾರು? ಅವರಿಗೆ ಗುರುತುಹತ್ತಲಿಲ್ಲ. ತಮ್ಮ ಹೆಮ್ಮೆಯನ್ನು ಹೀಯಾಳಿಸಿ ನಾಚಿದರು. ಸಣ್ಣ ಮೋರೆ ಮಾಡಿಕೊಂಡು ನಿಂತರು.

ಆಗ ಅನಸೂಯೆಗೆ ಕರುಣಹುಟ್ಟಿ ಮತ್ತೊಮ್ಮೆ ಪತಿಯ ಪಾದೋದಕ ವನ್ನು ತಳಿಯಲು, ಆ ಮೂರು ಶಿಶುಗಳು ಮೊದಲಿನಂತೆ ಬ್ರಹ್ಮ ವಿಷ್ಣು ಮಹೇಶ್ವರರಾದರು. ಆಗ ಶಾರದ ಲಕ್ಷ್ಮಿ ಪಾರ್ವತಿ ದೇವಿಯರು ಹರುಷಿತ ರಾಗಿ, ತಮ್ಮ ತಮ್ಮ ಪತಿದೇವರೊಡನೆ ಕೈಲಾಸಕ್ಕೆ ತೆರಳಿದರೆಂದು, ಪ್ರೌಢ ರಾಯನ ಕಾವ್ಯದಲ್ಲಿ ಶ್ರೀ ಜಕ್ಕಣಾಚಾರ್ಯರು ಪ್ರೌಢರಾಯನಿಗೆ ಹೇಳಿದ ಮಹಾ ಸತ್ಕಥೆಯಿದು.

# ಅನಲಾಯಿ



ಈಕೆಯು ಮಹಾಪತಿವ್ರತೆಯಾದ ಅನಸೂಯಾದೇವಿಯ ಮಗಳು. ಈಕೆಯು ಚಿಕ್ಕಂದಿನಿಂದಲೂ ದೇವತಾರ್ಚನೆಯಲ್ಲಿಯೇ ಕಾಲ ಕಳೆಯುತ್ತಾ, ಮದುವೆಯೆಂದರೆ ಒಲ್ಲೆಯೆನ್ನುತ್ತಿದ್ದಳು. ತಂದೆ ತಾಯಿಗಳು ಮಗಳಿಗೆ ಮದುವೆ ಮಾಡಿಕೊಳ್ಳಲು ಬಹಳ ಜುಲುಮೆ ಮಾಡಿದರು. ಆದರೂ ಕೇಳ ಲಿಲ್ಲ. ಅನಲಾಯಿಯು ಆಜನ್ಮ ಮದುವೆಯನೊಲ್ಲೆನೆಂದು, ದೃಢಪ್ರತಿಜ್ಞೆ ಯನ್ನು ಮಾಡಿಕೊಂಡಿರಲು, "ಹೆಳವನಾದ ಗಂಡ ನಿನಗೆ ಸಿಗುವನೆಂದು" ಕನಸ ಕಂಡಳು. ಕೂಡಲೇ ಚಿಂತಾಕ್ರಾಂತಳಾಗಿ, ಮನೆಯಲ್ಲಿದ್ದರೆ ಮದುವೆಯ ಮಾಡುವರೆಂದು, ಮನೆಯನ್ನು ತೊರದು ಹಿಮವತ್ಪರ್ವತಕ್ಕೆ ಹೋದಳು.

ಅಲ್ಲಿ ಶಿವನನ್ನು ಕುರಿತು ತಪಬಲಿದಳು ಅನ್ನ ನೀರು ತೊರೆದು ಬರಿ ಗಾಳಿ ಸೇವನ ಮಾಡಿದ್ದಳು ಮೈಮೇಲೆ ಹುತ್ತ ಬೆಳೆಯಿತು. ತಲೆಯ ಕೂದಲು ಜಡೆಗಟ್ಟಿತು. ಸುತ್ತಲೂ ಗಿಡಗಂಟಿಗಳು ಬೆಳದವು. ಹೀಗೆ ಎಷ್ಟೋ ವರ್ಷಗಳು ಕಳೆದವು ಆಕೆಯ ತಪಃಜ್ವಾಲೆಯು ಶಿವನಿಗೆ ಮುಟ್ಟಿತು ಆಗ ಶಿವನಿಗೆ ಅಂಕೆಯಾಗಿ, ಶಿವನು ಅನಲಾಯಿಗೆ ಪ್ರತ್ಯಕ್ಷನಾದನು. "ಮಗಳೇ ಮದುವೆಯನೊಲ್ಲೆನೆಂದು ಹಟ ಹಿಡಿಯಬೇಡ ನಿನ್ನಿಂದ ಜಗತ್ತಿನ ಮಹಿಳೆ ಯರು ಪತಿಭಕ್ತಿಯನ್ನು ಕಲಿಯಬೇಕಾಗಿದೆ. ಅದ್ದರಿಂದ ಇಲ್ಲೇ ಸಮೀಪದಲ್ಲಿ ಘೋರ ಮುನಿಯೆಂಬ ಎರಡೂ ಕಾಲಿಲ್ಲದ ಹೆಳವನಿದ್ದಾನೆ. ಆತನನ್ನು ಮದು ವೆಯಾಗಿ, ನಿಜಭಕ್ತಿಯಿಂದ ಆತನ ಸೇವೆಯನ್ನು ಮಾಡು. ಆ ಮೇಲೆ ನಿನಗೆ ಮುಕ್ತಿ ದೊರೆಯುವದು ಎಂದು ಹೇಳಿ ಅಂತರ್ಧನಾದನು.

ಆಗ ಅನಲಾಯಿಯು ಪರಮಾತ್ಮನ ಆಜ್ಞೆಯನ್ನು ಶಿರಸಾವಹಿಸಿ ನಡೆ ಯಲು ಹೊರಟಳು. ಅಷ್ಟರಲ್ಲಿ ಇದನ್ನೆಲ್ಲವನ್ನು ತಮ್ಮ ದಿವ್ಯಜ್ಞಾನದಿಂದ

ಅರಿತ, ಆಕೆಯ ತಂದೆ ತಾಯಿಗಳು ಮಗಳ ಬಳಿಗೆ ಬಂದರು. ಮಗಳು ತಪಸ್ಸಿನಿಂದ ಸೊರಗಿ ಬೆಂಡಾದುದನ್ನು ಕಂಡು ಮರುಗಿದರು. ಮಗಳೇ ! ಮೊದಲೇ ಮದುವೆಯಾಗೆಂದು ನಾವು ನಿನಗೆ ಹೇಳಲಿಲ್ಲವೇ ? ಆದದ್ದಾಯಿತು ಎಂದು ಸಮಾಧಾನವನ್ನು ಹೇಳಿ, ಘೋರಮುನಿಗೆ ಕೊಟ್ಟು ಮದುವೆಯ ಮಾಡಿದರು.

ಮುಂದೆ ಅನಲಾಯಿಯು ಗಂಡನನ್ನು ಹೆಗಲಮೇಲೆ ಹೊತ್ತುಕೊಂಡು, ಕಲ್ಯಾಣ ಪಟ್ಟಣದತ್ತ ಸಾಗಿದಳು. ಅದರ ಸಮೀಪದಲ್ಲಿ ಆ ಪಟ್ಟಣದ ಪದ್ಮಾವತಿ ಯೆಂಬ ವೇಶ್ಯೆಯು ಎರಕೊಂಡ ನೀರಿನ ಕಾಲುವೆಯೊಂದು ಹರಿಯುತ್ತಿತ್ತು. ಆ ನೀರನ್ನು ದಾಟದೆ ಅನಲಾಯಿಯು ಸುತ್ತುವರಿದು ಕಲ್ಯಾಣ ಪಟ್ಟಣಕ್ಕೆ ಬರುತ್ತಿರುವದನ್ನು ನೋಡಿ, ಹೆಗಲಮೇಲಿದ್ದ ಆಕೆಯ ಗಂಡನು ಹೀಗೇಕೆ ? ಎಂದು ಕೇಳಿದನು. ಈ ಪಟ್ಟಣದ ಪದ್ಮಾವತಿ ಯೆಂಬ ಸೂಳೆಯು ಎರಕೊಂಡ ಕೀಳು ಜಲವಿದು. ಇದನ್ನು ದಾಟಬಾರದೆಂದು ಹೀಗೆ ಹೋಗುತ್ತಿರುವೆನೆಂದು ಹೇಳಿದಳು.

ಆಗ ಅನಲಾಯಿ ಗಂಡನು ಹೆಂಡತಿಯ ಮನವ ನೋಡಲೋಸುಗವೋ? ಅಥವಾ ಪದ್ಮಾವತಿಗೆ ಮನವೆಳಸಿಯೋ ? ಇಂದು ಆ ಪದ್ಮಾವತಿಯ ಸಂಗ ದಲ್ಲಿ ನನ್ನನ್ನು ಬಿಟ್ಟು ಬರಬೇಕೆಂದು ಹೆಂಡತಿಗೆ ಹೇಳಿದನು ಆಗ ಪತಿ ಯಾಜ್ಞೆಯನ್ನು ತಲೆಯಲ್ಲಿ ಹೊತ್ತ ಅನಲಾಯಿಯು, ಬಹು ಯೋಚನೆಗೊಳ ಗಾಗಿ ಆಗಲೆಂದು ಒಪ್ಪಿಕೊಂಡಳು. ಆ ರಾತ್ರಿ ಒಂದು ಗುಡಿಯಲ್ಲುಳಿದು ಕೊಂಡು, ಭಿಕ್ಷಾನ್ನವನ್ನು ತಂದು ಪತಿಯ ಭೋಜನವ ಮಾಡಿಸಿದಳು. ತಾನೂ ಉಂಡು ನಸುಕಿನಲ್ಲೆದ್ದು ಪದ್ಮಾವತಿಯ ಅಂಗಳವಗುಡಿಸಿ, ಸಾರಿಸಿ ಚಿತ್ರ–ವಿಚಿತ್ರತರವಾದ ರಂಗೋಲಿಗಳನ್ನು ಹಾಕಿ, ಯಾರಿಗೂ ತಿಳಿಯದಂತೆ ಪತಿಯ ಬಳಿಸೇರಿದಳು.

ಮರುದಿನ ಮುಂಜಾನೆ ಪದ್ಮಾವತಿಯು ಎದ್ದು, ಎಂದೂ ಇಲ್ಲದ ತನ್ನ ಅಂಗಳದಲ್ಲಿ ಹಾಕಿದ್ದ ರಂಗೋಲಿಗಳನ್ನು ಕಂಡು, ಆಶ್ಚರ್ಯಭರಿತಳಾದಳು. ತನ್ನ ಪರಿಚಾರಿಕೆಯರನ್ನು ಕರೆದು ಈ ರಂಗೋಲಿಗಳನ್ನು ಹಾಕಿದವರು ಯಾರೆಂದು ಕೇಳಿದಳು. ಪ್ರತಿಯೊಬ್ಬರೂ ನಾವಲ್ಲ ತಾವಲ್ಲ ಎಂದರು. ಆಗ

ಪದ್ಮಾವತಿಯು ಅಚ್ಚರಿಪಟ್ಟು ಇದು ಸಾಮಾನ್ಯ ಹೆಂಗಳೆಯರಿಂದ ಆದ ಕೆಲಸವಲ್ಲ ಯಾರೋ ಮಹಾ ಸಾಧ್ವಿಮಣಿಗಳಿಂದ ಆದ ಕೆಲಸವೆಂದು ತಿಳಿದು ಮರುದಿನ ಕಾವಲಿಟ್ಟಳು.

ಎಂದಿನಂತೆ ಅನಲಾಯಿಯು ಎರಡನೆ ದಿನ ರಾತ್ರಿ ನಸುಕಿನಲ್ಲೆದ್ದು, ಪದ್ಮಾವತಿಯ ಅಂಗಳದಲ್ಲಿ ರಂಗೋಲಿಗಳನ್ನು ಹಾಕಿ ಬರುತ್ತಿದ್ದಳು. ಪರಿಚಾರಿಕೆಯರು ನೋಡಿ ಅನಲಾಯಿಯನ್ನು ಪದ್ಮಾವತಿಯ ಎದುರಿನಲ್ಲಿ ಒಯ್ದು ಒಪ್ಪಿಸಿದರು. ಆಗ ಪದ್ಮಾವತಿಗೆ ಅನಲಾಯಿಯನ್ನು ನೋಡಿದ ಕೂಡಲೇ ಭಕ್ತಿ ಉತ್ಪನ್ನವಾಗಿ, ಆಕೆಯ ಪಾದಕ್ಕೆರಗಿದಳು. ತಾಯೀ! ತಮ್ಮನ್ನು ನೋಡಿದರೆ ಮಹಾ ಸಾಧ್ವಿಶಿರೋಮಣಿ ಪತಿವ್ರತೆಯರಂತೆ ಕಾಣಿಸುತ್ತೀರಿ. ನಮ್ಮಂಥ ವೇಶ್ಯೆಯರ ಅಂಗಳ ಸಾರಿಸಿ ರಂಗವಲ್ಲಿಗಳ ಹಾಕಿದ ಕಾರಣವೇನು? ಅರುಹಬೇಕೆಂದು ಕೇಳಲು ಆಗ ಅನಲಾಯಿಯು ನಾಚಿಕೆಯಿಂದ ತಲೆಯ ಬಗ್ಗಿಸಿ, ' ಎಲೌ ಪದ್ಮಾವತಿಯೇ ಎರಡೂ ಕಾಲಿಲ್ಲದ ನನ್ನ ಗಂಡನು ನಿನಗೆ ಮನಸೋತಿರುವನು. ಅವನ ಇಚ್ಛೆಯನ್ನು ಈಡೇರಿಸೆಂದಳು. ಆಗ ಪದ್ಮಾವತಿಯು ಅನಲಾಯಿಯ ಪತಿಭಕ್ತಿಗೆ ಮೆಚ್ಚಿ ಆಗಲೆಂದು ಒಪ್ಪಿಕೊಂಡಳು.

ಆ ದಿನ ರಾತ್ರಿ ಅನಲಾಯಿಯು ಪತಿಯನ್ನು ಹೆಗಲಮೇಲೆ ಹೊತ್ತುಕೊಂಡು ಹೋಗಿ, ಪದ್ಮಾವತಿಯ ಶಯನಗೃಹದ ಮಂಚದ ಮೇಲೆ ಕುಳ್ಳಿರಿಸಿದಳು. ತಾನು ಪದ್ಮಾವತಿಯ ಅಂಗಳದಲ್ಲಿ ಕಾದಿದ್ದು, ಪುನಃ ನಸುಕಿನಲ್ಲಿ ಪತಿಯನ್ನು ಹೊತ್ತುಕೊಂಡು ಬೇರೊಂದು ಗ್ರಾಮಕ್ಕೆ ಹೋಗುತ್ತಿದ್ದಳು. ಆ ಮಾರ್ಗದಲ್ಲಿ **ಮಾಂಡವ್ಯ** ನೆಂಬ ಋಷಿಯು **ಚಂಚಲೆ-ಚಪಲೆ** ಎಂಬ ಇಬ್ಬರ ಹೆಂಡರ ಕಾಟವನ್ನು ತಡೆಯಲಾರದೆ, ಅವರಿಬ್ಬರನ್ನು ಶೂಲಕ್ಕೇರಿಸಿ, ಆ ಪಾಪನಿವಾರಣೆಗಾಗಿ ತಾನು ಮೇಣದ ತ್ರಿಶೂಲವನ್ನು ಮಾಡಿ, ಅದರ ಮೇಲೆ ಮಲಗಿ ತಪಸ್ಸು ಮಾಡುತ್ತಿರುವಾಗ ಅದು ಉಕ್ಕಿನ ತ್ರಿಶೂಲವಾಗಿ ಹೊಟ್ಟೆಯಲ್ಲಿ ನಟ್ಟು, ಬೆನ್ನಲ್ಲಿತೂರಿ ಹಾ ಎಂದು ಗೋಳಾಡುತ್ತಿದ್ದನು.

ಆ ಸಮಯದಲ್ಲಿ ಕತ್ತಲಲ್ಲಿ ಧಾವಿಸಿ ನಡೆಯುತ್ತಿದ್ದ ಅನಲಾಯಿಯು ಆತನನ್ನು ಎಡವಿದಳು. ಆಕೆಯ ಪತಿಯ ಮೊಂಡಗಾಲು ಮಾಂಡವ್ಯ ಋಷಿಗೆ

ಹಾಕಿತು. ಮೊದಲೇ ನೋವಿನಲ್ಲಿದ್ದ ಋಷಿಗೆ ಮತ್ತಷ್ಟು ನೋವಾಗಿ, "ನನ್ನನ್ನು ನೋಯಿಸಿದವರ ತಲೆಯು ಬೆಳಗಾಗುವದರೊಳಗಾಗಿ ಸಹಸ್ರ ಹೋಳಾಗಲೆಂದು" ಶಪಿಸಿದನು. ಇದನ್ನು ಕೇಳಿ ಅನಲಾಯಿಯು ಬೆಚ್ಚಿ ಬಿದ್ದಳು. ಬೆಳಗಾಗುವದು ಇನ್ನು ಸ್ವಲ್ಪ ವೇಳೆ ಉಳಿದಿತ್ತು. ತಡಮಾಡಿದರೆ ಸೂರ್ಯದೇವನು ಮೂಡುವನು ಗಂಡನ ತಲೆ ಸಹಸ್ರ ಹೋಳಾಗುವದು. ಏನು ಮಾಡಲಿ? ಎಂದು ಥಟ್ಟನೆ ಯೋಚಿಸಿ "ಎಲೌ ಸೂರ್ಯದೇವನೇ ನೀನು ಮೂಡಿದರೆ ನಿನಗೆ ಆಣೆ" ಎಂದು ನುಡಿದಳು ಪತಿವ್ರತೆಯು ಇಟ್ಟ ಆಣೆಗೆ ಸೂರ್ಯದೇವನು ಹೆದರಿ ಮೂರು ದಿನಗಳ ವರೆಗೆ ಮೂಡಲಿಲ್ಲ.

ಜಗತ್ತಿನ ಜನರು ಮೂರು ದಿನಗಳ ವರೆಗೆ ಸೂರ್ಯದೇವನ ಬೆಳಕನ್ನು ಕಾಣದೆ ಮಿಡುಕಿದರು. ಎಲ್ಲರೂ ಬಂದು ಅನಲಾಯಿಯನ್ನು ಕುರಿತು ತಾಯೇ! ಸೂರ್ಯನಿಗಿಟ್ಟ ಆಣೆಯನ್ನು ಹಿಂದಕ್ಕೆ ತೆಗೆದುಕೊಂಡು, ನಮ್ಮೆಲ್ಲರನ್ನು ಬದುಕಿಸೆಂದು ಪ್ರಾರ್ಥಿಸಿಕೊಂಡರು. "ಎಲೈ ಸೂರ್ಯದೇವನೇ! ನೀನು ನನ್ನ ಮುತ್ತೈದೆತನವನ್ನು ಕಾಪಾಡುವೆನೆಂದು ನನಗೆ ಭರವಸೆಯನ್ನು ಕೊಟ್ಟರೆ ನಾನು ನಿನಗಿಟ್ಟ ಆಣೆಯನ್ನು ಹಿಂದಕ್ಕೆ ತೆಗೆದುಕೊಳ್ಳುವೆನೆಂದು ಅನಲಾಯಿ ನುಡಿದಳು. ಸೂರ್ಯದೇವನು ಅನಲಾಯಿಗೆ ಭರವಸೆಯನ್ನು ಕೊಟ್ಟು ಮೂಡಿದನು. ಋಷಿಯ ಶಾಪ ತಪ್ಪಲಿಲ್ಲ ಅನಲಾಯಿಯ ಗಂಡನ ತಲೆಯು ಒಡೆದು ಸಹಸ್ರ ಹೋಳಾಯಿತು. ಆದರೆ ಸೂರ್ಯದೇವನ ಭರವಸೆಯು ಏನಾಯಿತು? ಸರ್ವಾಂಗ ಸುಂದರನಾದ ನವಯೌವ್ವನ ಪುರುಷನಾದನು, ಅನಲಾಯಿಯ ಗಂಡ. ಪರಮಾತ್ಮನು ಅನಲಾಯಿಯ ಗಂಡನನ್ನೂ ಅನಲಾಯಿಯನ್ನೂ ಬಹುಕಾಲ ಸುಖದಿಂದ ಇಹಲೋಕದಲ್ಲಿ ಇರಗೊಟ್ಟು, ಅಂತ್ಯಕಾಲದಲ್ಲಿ ಇಬ್ಬರನ್ನು ಜೋಡಿನಿಂದ ತನ್ನ ಕೈಲಾಸಕ್ಕೆ ಕರದೊಯ್ದನೆಂದು, ಪ್ರೌಢ ರಾಯನ ಕಾವ್ಯದಲ್ಲಿ ಜಕ್ಕಣಾಚಾರ್ಯರು ಪ್ರೌಢರಾಯನಿಗೆ ಹೇಳಿದ ಸತ್ಕಥೆಯಿದು.



